


# ಸಪ್ತಗಿರಿ

ಮಾರ್ಚ್, 1993

ಬೆಲೆ : ರೂ. 1/-

ತಿರುಮಲೆ ತಿರುಪತಿ ದೇವಸ್ಥಾನಗಳ ಸಚಿತ್ರ ಮಾಸಪತ್ರಿಕೆ



ಶರಣು ಶರಣಯ್ಯ || ಪ ||

ಶರಣು ಶ್ರೀ ವೈಕುಂಠ ನಾಯಕ ಶರಣು ಶ್ರೀ ಪುರುಷೋತ್ತಮ
ಶರಣು ಶ್ರೀಧರ ಗರುಡವಾಹನ ಶರಣು ವೆಂಕಟನಾಯಕ || ೧ ||

ಆದಿದೇವ ಮುನೀಂದ್ರ ವಂದಿತ ಅಖಿಳ ಸುರಗಣ ಸೇವಿತ
ವೇದ ವೇದ್ಯ ವಿರಿಂಚಿ ಸನ್ನುತ ವೆಂಕಟೇಶ ನಮೊ ನಮೋ || ೨ ||

ಶರಣು ಸುರಮುನಿ ಹೃದಯ ಪಾಲಕ ಶರಣು ಭಕ್ತ ರಕ್ಷಕ
ಶರಣು ಶ್ರೀ ಹಯವದನ ಮುಕ್ತಿದ ಶರಣ ಓಂಕಾರ ನಾಮಕ || ೩ ||

---ಶ್ರೀ ವಾದಿರಾಜರು.



ಸಂದರ್ಶಿಸಿ. ಆನಂದಿಸಿ.

# ಶ್ರೀ ಕೋದಂಡರಾಮಸ್ವಾಮಿ ದೇವಾಲಯ
## ತಿರುಪತಿ.
## ವಾರ್ಷಿಕ ಬ್ರಹ್ಮೋತ್ಸವ





**21--3--93 ರಿಂದ 30--3--93 ವರೆಗೆ**

| | | |
|---|---|---|
| 21--3--93 | ಗುರುವಾರ | ಅಂಕುರಾರ್ಪಣೆ. |
| 22--3--93 | ಶುಕ್ರವಾರ | ಧ್ವಜಾರೋಹಣ. |
| 26--3--93 | ಶನಿವಾರ | ಗರುಡೋತ್ಸವ. |
| 29--3--93 | ಸೋಮವಾರ | ರಥೋತ್ಸವ. |
| 30--3--93 | ಮಂಗಳವಾರ | ಧ್ವಜಾವರೋಹಣ. |

ಸೂಚನೆ : ಬ್ರಹ್ಮೋತ್ಸವದ ದಿನಗಳಲ್ಲಿ ದಿನವೂ ಬೆಳಗ್ಗೆ ಸಾಯಂಕಾಲಗಳಲ್ಲಿ ವಿವಿಧ ವಾಹನ ಸೇವೆಗಳಿರುತ್ತವೆ. ಸಾಂಸ್ಕೃತಿಕ ಕಾರ್ಯಕ್ರಮಗಳು ಏರ್ಪಾಡಾಗಿರುತ್ತವೆ. ಶ್ರೀ ಕೋದಂಡರಾಮಸ್ವಾಮಿ ದೇವಾಲಯ ತಿರುಪತಿಯ ಶ್ರೀ ಗೋವಿಂದರಾಜಸ್ವಾಮಿ ದೇವಾಲಯದಿಂದ ಅರ್ಧ ಮೈಲಿ ದೂರದಲ್ಲಿ ಅಲಿಪಿರಿಗೆ ಹೋಗುವ ಮಾರ್ಗದಲ್ಲಿದೆ.

**ನೀವೂ ಬನ್ನಿ. ತಿ. ತಿ. ದೇ. ನಿಮ್ಮವರನ್ನೂ ಕರೆತನ್ನಿ.**




ಗೌರವ ಸಂಪಾದಕರು :

ಶ್ರೀ ಡಿ.ವಿ.ಎಲ್.ಎನ್. ಮೂರ್ತಿ, ಐ.ಎ.ಎಸ್.,

ಕಾರ್ಯನಿರ್ವಹಣಾಧಿಕಾರಿ

ತಿ.ತಿ.ದೇ., ತಿರುಪತಿ.

ಸಂಪಾದಕ :

ಕೆ. ಸುಬ್ಬಾರಾವು ಎಂ.ಎ.

ಉಪಸಂಪಾದಕ :

ಬಿ.ಎನ್. ಶ್ರೀನಿವಾಸನ್ ಎಂ.ಎ.

ಮುದ್ರಣ :

ಎಂ. ವಿಜಯಕುಮಾರ್‌ರೆಡ್ಡಿ

ಲೇಖನ/ಜಾಹೀರಾತುಗಳಿಗೆ

ಮಿಕ್ಕ ವಿವರಗಳಿಗೆ

ಸಂಪಾದಕರು,

ತಿರುಮಲೆ ತಿರುಪತಿ ದೇವಸ್ಥಾನಗಳು,

ತಿರುಪತಿ.

---

ಸಪ್ತಗಿರಿಯ ಎಲ್ಲ ಭಾಷೆಯ ಪ್ರತಿಗಳೂ

ಎಲ್ಲ ತಿ.ತಿ.ದೇ. ವಿಚಾರಣಾಕೇಂದ್ರಗಳಲ್ಲಿ

ದೊರೆಯುವುವು.

---

**ಬಿಡಿ ಪ್ರತಿ ೧--೦೦**

**ವಾರ್ಷಿಕ ಚಂದಾ ೧೨--೦೦**


---




**ಸಂಪುಟ ೨೩] ಮಾರ್ಚ್ ೧೯೯೩ [ಸಂಚಿಕೆ ೧೦**


# ವಿಷಯಸೂಚಿ



---

ಮುಖಚಿತ್ರ : ಹನುಮತ್ಸಮೇತ ಸೀತಾರಾಮ ಲಕ್ಷ್ಮಣರು. ಚಿತ್ರ -- ದ್ವಾರಕನಾಥ.

ಹಿಂಬದಿಯಲ್ಲಿ : ಯುಗಾದಿ ಸಂತಸ -- ಚಿತ್ರ--ಮಾ.ಶ್ರೀ.

ಒಳಗಡೆ : 1. ವಸಂತೋತ್ಸವದಲ್ಲಿ ಶ್ರೀ ವೆಂಕಟೇಶ್ವರಸ್ವಾಮಿ

**2. ನಾಗುಲಾಪುರ ಶ್ರೀ ಕಲ್ಯಾಣ ವೆಂಕಟೇಶ್ವರಸ್ವಾಮಿ ದೇವಾಲಯ.**




ಭಾರತದಲ್ಲಿ ಮೊದಲು ಕಂಡುಬರುವ ಲಿಖಿತ ಐತಿಹಾಸಿಕ ಕಾಲನಿರ್ದೇಶಕ ದಾಖಲೆ ಅಶೋಕನ ಧರ್ಮಶಾಸನಗಳದ್ದು. (ಅದಕ್ಕೂ ಹಿಂದೆ ವೈದಿಕ ಸಾಹಿತ್ಯ ಪ್ರಾಚುರ್ಯದಲ್ಲಿದ್ದಿತು ಎಂಬುದು ಬೇರೆ ವಿಷಯ) ಈ ಧರ್ಮಶಾಸನಗಳ ವಿಷಯ ಹಿಂಸೆಯ ವಿರೋಧವಾಗಿ ಅಹಿಂಸೆಯ ಪ್ರಸಾರ. ಅಹಿಂಸೆಯನ್ನು ಪರಮಧರ್ಮ ಎಂದು ತೀರ್ಮಾನಿಸಿದ ಸಾಹಿತ್ಯವೇ ಸನಾತನಧರ್ಮದ ಎಲ್ಲ ಮೂಲೆಗಳಲ್ಲೂ. ದಯವಿಲ್ಲದ ಧರ್ಮ ಆವುದು ಎಂದು ಕೇಳಿದ ಅಕ್ಕನೂ ದಯವೇ ಬೇಕು ಸರ್ವಪ್ರಾಣಿಗಳಲ್ಲಿ ಎಂದು ಉಪದೇಶಿದ್ದುಂಟು. ಒಟ್ಟು ಧರ್ಮದ ತಿರುಳು ಸಹಿಷ್ಣುತೆ ಅಹಿಂಸೆ ಎಂಬುದು ಬಲ್ಲವರು ಬಹುಕಾಲದಿಂದ ಹೇಳುತ್ತ ಬಂದಿರುವ ಅಂಶ. ಇಂತಹದ್ದು ಭಾರತದ ಘನತೆ. ಜಗತ್ತಿನಲ್ಲಿ ಎಲ್ಲೂ ಕಂಡುಬರದ ವೈವಿಧ್ಯದ ಜೊತೆಗೇ ಒಳಗೊಂಡು ಮುನ್ನಡೆಯುವಿಕೆಯನ್ನು ಸನಾತನ ಧರ್ಮದಲ್ಲಿ ಕಂಡುಕೊಳ್ಳಬಹುದಾಗಿದೆ. ಇದು ಭಾರತದ ವೈಶಿಷ್ಟ್ಯ. ಇಂತಲ್ಲಿ 20ನೇ ಶತಕ ಮುಗಿವ ಈ ಹೊತ್ತಿನಲ್ಲಿ ಹೊತ್ತಿ ಉರಿಯುವ ಹಿಂಸಾಜ್ವಾಲೆಗೆ ಏನೆನ್ನಬೇಕು. ಪರಂಪರೆಯ ಪರಿಜ್ಞಾನವಿಲ್ಲವಾಗಿದ್ದು ಎನ್ನೋಣವೇ? ಐತಿಹಾಸಿಕ ಶಿಕ್ಷಣ ಲೋಪವೆನ್ನೋಣವೇ? ಮನುಷ್ಯನ ಋಣಾತ್ಮಕ ಗುಣಗಳ ವೈಪರೀತ್ಯವೆನ್ನೋಣವೇ? ಸಹಬಾಳ್ವೆಯ, ಸೌಭ್ರಾತೃತ್ವದ ಭಾವಗಳ ಲುಪ್ತತೆಯೆನ್ನೋಣವೇ?

ಏನು ಹೇಳಿದರೂ ಯಾವ ಹೆಸರಿಟ್ಟರೂ ನಷ್ಟ, ಪ್ರಾಣ, ಧನ, ರಚನಾತ್ಮಕ ಕ್ರಿಯಾ ರಂಗಗಳಲ್ಲಿ -- ಅಪಾರವಾದದ್ದು ಎಂಬುದನ್ನು ಎಲ್ಲರೂ ಒಪ್ಪಬೇಕು. ಈ ಸಾರ್ವಜನಿಕ ಸಾರ್ವತ್ರಿಕ ನಷ್ಟಕ್ಕೆ ಹೊಣೆ ಯಾರಾದರೂ ಆಗಿರಬಹುದು. ತುಂಬಿಕೊಳ್ಳುವ ಬಗೆ ಹೇಗೆ?

ನಮಗೇಕೆ ಸಹನೆ ಕಡಮೆಯಾಗುತ್ತಿದೆ ಎಂಬುದನ್ನು ಯೋಚಿಸಬೇಕು. ಯಂತ್ರಯುಗದ ಓಡುವ ಬದುಕಿನಲ್ಲಿ ಪದ್ಮಸನ ಹಾಕಿ ಕುಳಿತು ಮಿಮಾಂಸೆ ಮಾಡುವ ಬಿಡುವು ದೊರಕದಿರುವುದು, ಬದುಕು ಬಹು ಕಿರಿದು ಸಾಧಿಸಬೇಕಾದ್ದು ಬಹಳಷ್ಟು -- ಎನ್ನುವ ತಾತ್ವಿಕತೆಗಳನ್ನು ಲೌಕಿಕ ದೃಷ್ಟಿಯಿಂದ ನೋಡುವಾಗ, ಆತುರ, ಅಸಹನೆ ಸಹಜ. ಆದರೆ ಅವುಗಳನ್ನು ಸೃಜನಾತ್ಮಕತೆಯೆಡೆಯಲ್ಲಿ, ಸರ್ವತೋಮುಖ ಅಭಿವೃದ್ಧಿಯತ್ತ ಬಳಸಿದರೆ ಯುಕ್ತವಾದೀತು. ಕ್ರಿಕೆಟ್ ರಂಗದಲ್ಲಿ ಹತ್ತುಸಾವಿರಕ್ಕೂ ಹೆಚ್ಚು ರನ್‌ಗಳಿಸಿದ ಗವಾಸ್ಕರ್ ತಮ್ಮ ಜೀವನದಲ್ಲಿ ಎಂದೂ ಓಡದಷ್ಟು ವೇಗವಾಗಿ ಓಡಿದರು, ಒಂದು ಕುಟುಂಬವನ್ನು ಕಾಪಾಡಲು. ಅವರು ಆ ಪರಿಸ್ಥಿತಿಯಲ್ಲಿ ತೋರಿಸಿದ ಆತುರ ಅಸಹನೆಯ ಓಟ ಅವರ ಜೀವನದ ಎಲ್ಲ ಓಟಕ್ಕಿಂತ ಅತ್ಯುತ್ತಮ ಫಲ ನೀಡಿತು ಎನ್ನಬೇಕು.

ಎಲ್ಲ ಮಾತಿನ ಧಾಟಿ -- ಹಿಂಸೆ ಹೈಂದವ ಧರ್ಮಕ್ಕೆ ಹೊರತು ಎಂಬುದು. ಆ ಮೂಲಕವಾಗಿಯೇ ಭಾರತಕ್ಕೂ ಹೊರತು. ಅದನ್ನು ಪರಂಪರೆಯಿಂದ ಘೋಷಿಸುತ್ತ, ಬಾಳುತ್ತ, ಬಂದಿರುವ ನಮ್ಮ ನಡುವೆ ಇಂದು ವೈವಿಧ್ಯಮಯವಾದ ಇಕ್ಕಟ್ಟುಗಳುಂಟಾಗಿ, ಅಹಿಂಸೆಯಿಂದ ದೂರ ನಡೆವ ದಾರಿಯಲ್ಲಿದ್ದೇವೆ. ಇದರಿಂದ ಯಾರೂ ಎಂದೂ ಉದ್ಧಾರವಾಗಿಲ್ಲವೆಂಬುದನ್ನು ಇತಿಹಾಸ ಸ್ಪಷ್ಟವಾಗಿ ಖಚಿತವಾಗಿ ತಿಳಿಯ ಹೇಳುತ್ತಿದ್ದರೂ ಭ್ರಮಾಧೀನರಾಗಿ ನಡೆಯುತ್ತಿದ್ದೇವೆ. ಈ ಪರಿಸ್ಥಿತಿಯಿಂದ ಬಿಡುಗಡೆಯಾಗಿ ಅಹಿಂಸಾಮಾರ್ಗದಲ್ಲಿ ಭಾರತ ಸಾಗುವಂತಾಗಬೇಕಾದರೆ ಶ್ರೀ ಸಾಮಾನ್ಯರೂ ಯೋಚಿಸಬೇಕು. ಅದಕ್ಕೆ ಶ್ರೀನಿವಾಸನ ಅನುಗ್ರಹವಾಗಲಿ ಭಾರತ ಮತ್ತೆ ಸಹನೆ, ಶಾಂತಿ ಸೌಹಾರ್ದಗಳ ನಾಡು ಆಗಲಿ ಎಂದು ಶ್ರೀಮುಖ ನಾಮ ಸಂವತ್ಸರಾರಂಭದಲ್ಲಿ ಸಪ್ತಗಿರಿ ಹಾರೈಸುತ್ತದೆ.

# ಸೊಗಸು ನೋಡಿರಿ

---ವಿದ್ವಾನ್ ಬಿ. ನ. ಗುಂಡೂರಾವ್.

ತಾಮ್ರಪತ್ರಗಳ ಮೇಲೆ ಭಕ್ತಿರಸಾಮೃತ ಧಾರೆಯನ್ನು ಹರಿಸಿ, ಶೇಷಾದ್ರಿ ನಿಲಯನ ಶ್ರೀಪಾದಗಳನ್ನಭಿಷೇಕಿಸಿ, ಧನ್ಯನಾದ ವಾಗ್ಗೇಯಕಾರ ಅನ್ನಮಾಚಾರ್ಯ, ತನ್ನ ಅಮೂಲ್ಯ ಸಂಕೀರ್ತನೆಗಳ ಮೂಲಕ ಅಜರಾಮರ ಕೀರ್ತಿಯನ್ನು ಸಂಪಾದಿಸಿಕೊಂಡಿದ್ದಾನೆ. ಭಾರತೀಯ ಸಂಗೀತ ಪ್ರಪಂಚದಲ್ಲಿ ಧ್ರುವತಾರೆಯಾಗಿದ್ದಾನೆ. ದೇವನಲಿ ಭಕ್ತಿ, ಭೋಗದಿವಿರಕ್ತಿ, ಜೀವಲೋಕದಿ ಮೈತ್ರಿ --ಎಂಬ ಈ ತತ್ವತ್ರಯಗಳ ಮೂರ್ತಿಮಂತ ಜೀವ ಅನ್ನಮಾಚಾರ್ಯ.

ಸಂಗೀತ ಪ್ರಪಂಚದಲ್ಲಿ ಜಾವಳಿಗಳು -- ಎಂಬ ಮಾತಿದೆ. ಇವು ಸಾಧಾರಣವಾಗಿ ಶೃಂಗಾರ ಪ್ರಧಾನ ರಚನೆಗಳು. ನಾಯಕ ನಾಯಕಿಯರ ವಿರಹ -- ಕಟಕಿಮಾತುಗಳು -- ಉಪಾಲಂಭ -- ಉತ್ಕಂಠೆ...... ಇತ್ಯಾದಿಗಳು ಈ ರಚನೆಗಳಲ್ಲಿ ಕಂಡುಬರುವ ಪ್ರಧಾನ ವಸ್ತು. ಸರಸವಾದ ಈ ಜಾವಳಿಗಳನ್ನು ನಾಟ್ಯಕ್ಕೂ ಅಳವಡಿಸಿಕೊಳ್ಳಲಾಗುತ್ತದೆ. ಶೃಂಗಾರವೂ ಭಕ್ತಿಯ ಒಂದು ರೂಪವೇ ಆಗಿರುವುದರಿಂದ ಜಾವಳಿಗಳೂ ಸಹ ಒಂದು ದೃಷ್ಟಿಯಿಂದ ಭಕ್ತಿಗೀತೆಗಳೇ ಆಗಿರುತ್ತವೆಂದು ಕೆಲವು ಹಿರಿಯರ ಅಭಿಪ್ರಾಯವಿದೆ. ಕೃತಿಕಾರನು ತನ್ನನ್ನೇ ನಾಯಕಿಯಾಗಿ ಮಾಡಿಕೊಂಡು ಹೃದಯಾಂತರಾಳದ ಭಗವದ್ವಿರಹವನ್ನು ತೋಡಿಕೊಂಡಿರುವ ಪ್ರಸಂಗಗಳೂ ಬೇಕಾದಷ್ಟಿವೆ.

ಅನ್ನಮಾಚಾರ್ಯನ ಅಮೂಲ್ಯ ಕೀರ್ತನೆಗಳನ್ನು ಪ್ರಧಾನವಾಗಿ ಅಧ್ಯಾತ್ಮಗೀತೆಗಳು -- ಶೃಂಗಾರಗೀತೆಗಳು -- ಎಂದು ಎರಡುಭಾಗವಾಗಿ ವಿಂಗಡಿಸಲಾಗಿದೆ. ಒಂದೊಂದು ವಿಭಾಗದಲ್ಲೂ ಸಾವಿರಾರು ಕೀರ್ತನೆಗಳನ್ನು ರಚಿಸುವುದರಲ್ಲಿ ತನ್ನ ಅನುಪಮ ಕಲಾಕೌಶಲ ಹಾಗೂ ಸುಪಕ್ವ ಭಕ್ತಿಭಾವವನ್ನು ವ್ಯಕ್ತಪಡಿಸಿರುವ ಈ ಪೂಜ್ಯವಾಗ್ಗೇಯಕಾರ ಕಲ್ಪನೆಗರಿಗೆದರಿ ವ್ಯೋಮಸಂಚಾರಿಯಾಗಿ ಹೊರಟಾಗ ಅದಕ್ಕೆ ಸಹಸ್ರಸಹಸ್ರ ಚಿತ್ರ ವಿಚಿತ್ರ ಸಂಗತಿಗಳು ಗೋಚರವಾಗುತ್ತವೆ. ಅದಕ್ಕೆ ಕಾವ್ಯರೂಪ ಕೊಟ್ಟು ಬಣ್ಣಿಸುವ ಕಲೆಗಾರಿಕೆಯಂತೂ ಅತ್ಯಂತ ರಮಣೀಯವಾಗಿರುತ್ತದೆ. ಉದಾಹರಣೆಗಾಗಿ ಒಂದು ಕವಿತೆಯನ್ನು ಪ್ರಸ್ತಾಪಮಾಡಲಾಗುತ್ತದೆ. ಇಲ್ಲಿ ಅನ್ನಮಯ್ಯ ಶ್ರೀನಿವಾಸನ ಪಟ್ಟದರಸಿ ಮಹಾಲಕ್ಷ್ಮಿಯನ್ನು ವರ್ಣಿಸುತ್ತಾನೆ.

ಆಕೆ ಕ್ಷೀರಾಬ್ಧಿಸಂಜಾತೆ -- ಪಾಲ್ಗಡಲಕುವರಿ. ಲಾವಣ್ಯ ಸೌಂದರ್ಯ -- ಸೌಕುಮಾರ್ಯಗಳ ತವರುಮನೆ. ಅಮೃತಕ್ಕಾಗಿ ಸಾಗರವನ್ನು ದೇವದಾನವರು ಕಡೆದಾಗ ಹುಟ್ಟಿಬಂದ ಅಮೂಲ್ಯವಸ್ತುಗಳು ಅನೇಕ. ಅದರಲ್ಲಿ ಭಕ್ತಜನ ಕಲ್ಪವಲ್ಲಿಯಾದ ಸಿರಿದೇವಿ ಲಕ್ಷ್ಮಿಯೂ ಒಬ್ಬಳು. ಈಕೆಯ ಸೌಂದರ್ಯಕ್ಕೆ ಮರುಳಾದ ದೇವದಾನವರು ಕಡೆಯುವುದನ್ನು ನಿಲ್ಲಿಸಿ -- ಅಮೃತವೂ ಬೇಡವೆಂದೇ ನಿರ್ಣಯಿಸಿಬಿಟ್ಟರು. ಸಿರಿದೇವಿ ದೊರೆತರಾಯ್ತು. ಅಮರತ್ವವೇಕೆ? -- ಇದು ಅವರ ತೀರ್ಮಾನ!! ಲಕ್ಷ್ಮಿಯನ್ನು ಎಲ್ಲರೂ ಬಯಸಿದರು. ಆದರೆ ಆಕೆ ಬಯಸದೇಕಲ್ಲ ನನ್ನನ್ನು ಯಾರು ಬಯಸುವುದಿಲ್ಲವೋ ನಾನವರನ್ನು ಬಯಸುತ್ತೇನೆ --ಎಂದಳು. ಇದು ವಿಚಿತ್ರ ಪರತ್ತು. ಎಲ್ಲರಿಗೂ ಎಲ್ಲವನ್ನು ನೀಡುವ, ಯಾರನ್ನೂ -- ಯಾರ ಉಪಕಾರವನ್ನೂ ಬಯಸದ, ಯಾರಿಂದಲೂ ಏನನ್ನೂ ನಿರೀಕ್ಷಿಸದ -- ಪರಿಪೂರ್ಣನಾದಾತ ಶ್ರೀನಿವಾಸನೊಬ್ಬನೇ. ಎಲ್ಲರೂ ಆತನ ಕೃಪೆಯನ್ನು ಬೇಡುವವರೇ ಹೊರತು (ಲಕ್ಷ್ಮಿಯೂ ಸಹ) ಆತ ಏನನ್ನೂ ಬಯಸುವವನಲ್ಲ. ಸಿರಿದೇವಿ, ಶ್ರೀಹರಿ ಶ್ರೀನಿವಾಸನ ಹೃನ್ಮಂದಿರ ನಿವಾಸಿನಿಯಾದಳು. ಆ ವಿಷಯ ಹಾಗಿರಲಿ.

ಅನ್ನಮಾಚಾರ್ಯ ಹೇಳುತ್ತಾನೆ - ಲಕ್ಷ್ಮೀದೇವಿಗೆ ಎಲ್ಲ ಸಂಪತ್ತೂ ತವರುಮನೆಯಿಂದಲೇ ಲಭ್ಯವಾಗಿತ್ತಂತೆ. ಆಕೆಯ ಮುಖ ಮುದ್ದಾಗಿದೆ ಪೂರ್ಣಚಂದ್ರನಂತೆ. ಚಂದ್ರ ಆಕೆಯ ಸೋದರನೇ ತಾನೆ!! ಶಶಾಂಕನೂ ಸಾಗರದಲ್ಲಿ ಹುಟ್ಟಿದವನೆ. ಅಮೃತಧಾರೆಯಂತಿದೆ ಆಕೆಯ ಮೃದುಮಧುರ ಮಂದಹಾಸ. ಅದೂ ಸಹ ಆಕೆಯ ತವರುಮನೆಯ ಸ್ವತ್ತು. ಸಾಗರ ಸದೃಶ ಗಾಂಭೀರ್ಯ ಆಕೆಗೆ ಬಂತಾದರೂ ಹೇಗೆ? ಆಕೆಯ ತಂದೆಯಿಂದ ಬಂದ ಗುಣವದು. ಸಿರಿದೇವಿಯ ಮೀನ ನೇತ್ರಗಳ ಲಾವಣ್ಯ? --ಅದೂ ಆಕೆಗೆ ತವರೂರಿಂದ ಬಂದದ್ದು. ಆಕೆಯ ಸುಕೋಮಲ ಪಾಣಿಪಲ್ಲವಗಳಿಗೆ ಆ ಮಾರ್ದವತೆ ಹೇಗೆಬಂತು. ಆಕೆಯ ಜತೆಯಲ್ಲಿ ಹುಟ್ಟಿದ್ದು ಕಲ್ಪವೃಕ್ಷವಲ್ಲವೆ? ಕಲ್ಪವೃಕ್ಷದ ಚಿಗುರಿನ ಕೋಮಲತೆ ಆಕೆಗೆ ಬಂದುದೇನಾಶ್ಚರ್ಯ? ಅದೇ ಕಲ್ಪಭೂರುಹದ ಕೋಮಲಾಂಕುರಗಳ ಅರುಣಿಮೆ ಲಕ್ಷ್ಮೀದೇವಿಯ ಪಾದಗಳಲ್ಲಿ ಸೇರಿಹೋದುದರಲ್ಲಾಶ್ಚರ್ಯವೇನುಂಟು? ಹೀಗೆ ಆಕೆಯ ಸೌಂದರ್ಯ -- ಗಾಂಭೀರ್ಯ -- ಸೌಕುಮಾರ್ಯ...... ಇತ್ಯಾದಿಗಳೆಲ್ಲವೂ ತವರು ಮನೆಯ ಸ್ವತ್ತು. ಹಾಗಾದರೆ ಈ ವಧು ಶ್ರೀನಿವಾಸನಿಂದ ಪಡೆದದ್ದೇನು? ಇದು ಸ್ವಾರಸ್ಯವಾದ ಪ್ರಶ್ನೆ. ಜಗವೆಲ್ಲ



ಆತನಿಂದ ಪಡೆಯುವುದೇನು ? ಕೃಪೆ. ಲಕ್ಷ್ಮೀದೇವಿ ಪಡೆದದ್ದೂ ಅದೇ ಇರಬಹುದು. ಜಗತ್ತಿನ ಯಾವ ವಸ್ತುವೂ ಈ ಕೃಪೆಗೆ ಸರಿಸಾಟಿಯಲ್ಲ. ಇದು ಸರ್ವೋತ್ತಮಸಿದ್ಧಾಂತ. ಅನ್ನಮಯ್ಯ ತನ್ನ ಕಾವ್ಯಮಯ ಭಾಷೆಯಲ್ಲಿ -- ಸಿರಿದೇವಿಯನ್ನು ಬಣ್ಣಿಸುವ ನೆಪದಲ್ಲಿ -- ತಿರುವೇಂಕಟೇಶನ ಅಪಾರ ಕೃಪಾಮಹಿಮೆಯನ್ನು ವಿವರಿಸಿದ್ದಾನೆ.

ಅನ್ನಮಾಚಾರ್ಯನ ಇನ್ನೊಂದು ಕೀರ್ತನೆ -- ಮನೋಹರಿ -- ರಾಗದಲ್ಲಿದೆ. ಈ ರಾಗ ಹೆಸರಿಗೆ ತಕ್ಕಂತೆ ಮನೋಹರವಾದದ್ದು. ಆದರೆ ತ್ಯಾಗರಾಜ ಸ್ವಾಮಿ ಈ ರಾಗದಲ್ಲಿ ಒಂದೇ ಒಂದು ಕೀರ್ತನೆ ರಚಿಸಿದ್ದೇಕೆ? ಬಹುಮಂದಿ ವಾಗ್ಗೇಯಕಾರರು ಈ ರಾಗದಲ್ಲಿ ಕೀರ್ತನೆಗಳನ್ನು ರಚಿಸದೇ ಇರಲು ಕಾರಣವೇನು? ಈ ಚರ್ಚೆ ಸಂಗೀತ ವಿದ್ವಾಂಸರಿಗೆ ಇರಲಿ. ಅನೇಕ ಲಕ್ಷಣ ಗ್ರಂಥಗಳಲ್ಲಿ ಸಹ ಈ ರಾಗದ ಬಗ್ಗೆ ಉಲ್ಲೇಖವಿಲ್ಲ. ೨೨ನೇ ಮೇಳಕರ್ತರಾಗವಾದ ಖರಹರ ಪ್ರಿಯರಾಗ ಜನ್ಯವಾದ ಮನೋಹರಿ ರಾಗದಲ್ಲಿರುವ--

ಅಲಮೇಲು ಮಂಗವು ನೀವು
ಅನ್ನಿಟಾ ನೇರ್ಪರಿವಿ
ಚಲಮು ಲೇಟಿಕಿ ನಿಕ ಸಮ್ಮತಿಂಚವೇ ||

ಎಂಬ ಕೀರ್ತನೆಯ ಲಲಿತಭಾವ ಸೌಂದರ್ಯವನ್ನು ಪರಿಚಯ ಮಾಡಿಕೊಳ್ಳೋಣ. ಪದ್ಮಾವತಿ ಶ್ರೀನಿವಾಸನ ಪ್ರಿಯಪತ್ನಿ. ಈಕೆ ಪರಮ ಮುಗ್ಧಸ್ವಭಾವದವಳು. ಲಾವಣ್ಯ ಜಲಧಿಯಂತಿರುವ ಈ



ಅಲಮೇಲ್ಮಂಗ ಮಾನವತಿ ಯಲ್ಲವೇ? ರಸಿಕಶಿಖಾಮಣಿಯಾದ ಶ್ರೀನಿವಾಸನ ಪ್ರಣಯ ಚೇಷ್ಟೆಗಳಿಗೆ ಅಷ್ಟು ಸುಲಭವಾಗಿ ಕರಗುವವಳಲ್ಲ. ಇದರರ್ಥ ಆಕೆ ಕಠಿನಾತ್ಮಳೆಂದಲ್ಲ -- ಅರಸಿಕಳೆಂದಲ್ಲ. ಮುಗ್ಧ ನಾಯಕಿಯನ್ನೊಲಿಸಿಕೊಳ್ಳುವ ಶೃಂಗಾರ ಕಲೆಯಲ್ಲಿ ಶ್ರೀನಿವಾಸ ತುಂಬ ನಿಪುಣನೆಂದು ಪ್ರತ್ಯೇಕವಾಗಿ ಹೇಳಬೇಕಾದ ಅಗತ್ಯವೇ ಇಲ್ಲ!! ಆಕೆಯ ಬಿಂಕ ಬಿಗುಮಾನವನ್ನು ಈ ಚೆಲುವ, ರಸಿಕ ದೃಷ್ಟಿಯಿಂದ ಸವಿಯುತ್ತಾನೆ.

ಒಲಿದು ಬಂದ ದೇವದೇವ ಶೇಷಾದ್ರಿನಿಲಯನ ಹತ್ತಿರ ಬಿಂಕ ಬಿಗುಮಾನ ಮಾಡಿ ಮಧುರ ಕ್ಷಣಗಳನ್ನು ಕಳೆದುಕೊಳ್ಳುವುದು ಬುದ್ಧಿವಂತಿಕೆಯಲ್ಲವೆಂದು ಆಪ್ತಸಖಿಯರು ಪದ್ಮಾವತಿಗೆ ಉಪದೇಶ ಹೇಳುತ್ತಾರೆ. ಆಕೆ ಒಬ್ಬಳೇ ಇದ್ದಾಗ!!

ವಿಡಿಯಮು ಚೇತಿಕಿಚ್ಚಿ ವಿಭುಡು ವೇಡುಕ ಪಡಿ
ವೊಡಿ ಪಟ್ಟಿ ಪೆನಗಗಾ ಒದ್ದನಕುವೇ ||

"ಪ್ರಭು ಶ್ರೀನಿವಾಸ ಬೆಟ್ಟದಷ್ಟು ಆಸೆಪಟ್ಟು ನಿನ್ನ ಬಳಿಗೆ ಬರುತ್ತಾನೆ. ಲಲ್ಲೆ ಮಾತಾಡುತ್ತ ತಾನೇ ಚಿಗುರು ವೀಳೆಯ ಮಡಿಸಿ ನಿನ್ನ ಕೈಗೆ ಕೊಟ್ಟಾಗ ಕೈಕೊಸರಿ ಹಾಕಬೇಡ -- ಬೇಡವೆನ್ನಬೇಡ. ಏಕೆಂದರೆ ನೀನು ಬೇಡವೆಂದರೆ ಬೇಕು -- ಎಂದರ್ಥವೆಂದು ಶ್ರೀನಿವಾಸನಿಗೆ ಖಂಡಿತ ಗೊತ್ತಿದೆ. ಹಾಗೇ ಆತ ತನ್ನ ಒಲವಿನ ಕುರುಹಾಗಿ ರತ್ನದುಂಗುರವನ್ನು ನಿನ್ನ ತಳಿರ್ಬೆರಳಿಗೆ ತಾನೇ ತೊಡಿಸಿದಾಗ ನೀನು ನಸುನಗುತ್ತ ಸ್ವೀಕರಿಸು. ಆತನ ಅನುನಯದ ವಾಣಿಗೆ ನೀನು ಸಮ್ಮತಿ ಸೂಚಿಸದಿದ್ದರೆ ನಷ್ಟಯಾರಿಗೆಂದು ಯೋಚಿಸಿದ್ದೀಯಾ ಪದ್ಮಾವತಿ? ಸ್ವಾಮಿ ಬಂದಾಗ ಮಂದಹಾಸದ ಅಲೆಯೊಂದು ನಿನ್ನ ಮುದ್ದು ಮುಖದಲ್ಲಿ ತೇಲಿಬರಲಿ. ಆತ ನಿನ್ನ ಮುಂಗುರುಳ ಮೇಲೆ ಕೈಯಾಡಿಸಿದಾಗ -- ಚತುರ್ದಶಭುವನಗಳನ್ನು ಕಾಪಾಡುವ ವರದಹಸ್ತಗಳವು -- ಎಂದು ನೀನು ಹೆಮ್ಮೆ ಪಟ್ಟುಕೊಳ್ಳಬೇಕು ದೇವಿ. ಆ ಸ್ವಾಮಿಯ ಹಸ್ತಸ್ಪರ್ಶದಿಂದ ನೀನು ಪುಲಕಿತಳಾಗುವುದು ನಿಜ. ಆದರೆ ಆತನ ಪಾದಸ್ಪರ್ಶದಿಂದ ನೀನು ಧನ್ಯಳಾಗಬೇಕೆಂಬುದನ್ನು ಮರೆಯಲಾಗದು. ಶ್ರೀನಿವಾಸ ಅಖಿಲಜಗದಂತರ್ಯಾಮಿ-- ಅಂತಹ ಪ್ರಭುವನ್ನು ನೀನು ತುಂಬ ಗೌರವದಿಂದ ಪ್ರೇಮದಿಂದ ಕಾಣಬೇಕು ಪದ್ಮಾವತಿ.

ಭಗವಂತ ವೇಂಕಟಾಧೀಶನ ಚರಣಾನುರಾಗದಲ್ಲಿರುವ ಆನಂದ ಇನ್ನೆಲ್ಲೂ ಇಲ್ಲ -- ಇನ್ನಾವುದರಲ್ಲೂ ಇಲ್ಲ. ಇದು ಈ ವಾಗ್ಗೇಯಕಾರನ ಸಂದೇಶ."

ಭಕ್ತಿ ನೀಪೈ ಒಕಟೇ ಪರಮಸುಖಮು || -- ಎಂಬ ಕೀರ್ತನೆಯಲ್ಲಿ ಅನ್ನಮಯ್ಯ ಜಗತ್ತಿಗೊಂದು ತರಣೋಪಾಯ ಸೂಚಿಸಿದ್ದಾನೆ. ತನ್ನ ಅನುಭವವನ್ನು ಕ್ರೋಢೀಕರಿಸಿ, ಮಧುರವಾದ ಧಾಟಿಯಲ್ಲಿ ದಿವ್ಯ ಸಂದೇಶವನ್ನು ನೀಡಿದ್ದಾನೆ. ಕಾದಂಬರಿ -- ಎಂಬ ಸುಪ್ರಸಿದ್ಧ ಗ್ರಂಥ ಬರೆದ ಬಾಣಭಟ್ಟನ ಮಾತನ್ನೂ ಸ್ವಲ್ಪ ಯೋಚಿಸಿನೋಡಿದಾಗ ಭಕ್ತಿಯೊಂದೇ ನೆಮ್ಮದಿ ಕೊಡುವುದು -- ಉಳಿದದ್ದೆಲ್ಲ ಅಶಾಂತಿಕಾರಕ ಎಂಬ ಮಾತು ಮನದಟ್ಟಾದೀತು.

"ಗರ್ಭೇಶ್ವರತ್ವಂ -- ಅಭಿನವ ಯೌವನತ್ವಂ -- ಅಪ್ರತಿಮ ರೂಪತ್ವಂ -- ಅಮಾನುಷ ಶಕ್ತಿತ್ವಂ ಚೇತಿ ಮಹತೀಯಂ ಖಲು ಅನರ್ಥಪರಂಪರಾ" ಇವೆಲ್ಲವೂ ಅನರ್ಥಕಾರಕ -- ಅಶಾಂತಿದಾಯಕ.

ಕುಲಮೆಂತ ಕಲಿಗಿನದಿ ಕೊಡಿಂಚು ಗರ್ವಮು
ಛಲಮೆಂತ ಕಲಿಗಿನದಿ ಜಗಡಮೇ ಲೇಪು
ತಲಂಪೆಂತ ಕಲಿಗಿನಾ ದಗಿಲಿಂಚು ಕೋರಿಕಲು

ಆಭಿಜಾತ್ಯ ಭಾವದಿಂದ ಗರ್ವ, ಛಲದಿಂದ ಜಗಳ, ಆಶೋತ್ತರಗಳಿಂದ ಕೋರಿಕೆಗಳು.

ಧನಮೆಂತ ಕಲಿಗಿನದಿ ದಟ್ಟಮೌ ಲೋಭಂಬು
ಘನವಿದ್ಯ ಕಲಿಗಿನನು ಮದಮು ಕಲುಗು

ಐಶ್ವರ್ಯದಿಂದ ಲೋಭಬುದ್ಧಿ -- ವಿದ್ಯೆಯಿಂದ ಒಂದು ರೀತಿಯ ಗರ್ವ, ಹೀಗೇ ಅನರ್ಥಪರಂಪರೆ ಬೆಳೆಯುತ್ತದೆ. ಅದಕ್ಕೇ ಅನ್ನಮಯ್ಯ ಹೇಳುವುದು--

ಭಕ್ತಿ ನೀಪೈ ಒಕಟೇ ಪರಮ ಸುಖಮು

ನಿನ್ನ ಮೇಲೆ ಭಕ್ತಿ ಇಟ್ಟರಾಯ್ತು. ಅದೊಂದೇ ಪರಮಾನಂದ ದಾಯಕ. ಭಗವದನುರಕ್ತಿ -- ಜೀವಲೋಕದಿ ಮೈತ್ರಿ -- ಇವೆರಡಕ್ಕೂ ಅನುಕೂಲ ವಾತಾವರಣ ಕಲ್ಪಿಸುವಷ್ಟು ಮಟ್ಟಿನ ವಿರಕ್ತಿ -- ಇಷ್ಟು ವಾಂಛನೀಯ -- ಯಾರಿಗೇ ಆದರೂ ಸಹ!!

ಶೃಂಗಾರಕ್ಕೆ ಭಕ್ತಿಯ ರಸಲೇಪವಿತ್ತ ವಾಗ್ಗೇಯಕಾರ ಅನ್ನಮಾಚಾರ್ಯ ಎಚ್ಚರಿಕೆ ನೀಡಿದ್ದಾನೆ--

ಮನುಜುಡೈಪುಟ್ಟಿ ಮನುಜುಲ ಸೇವಿಂಚಿ
ಅನುದಿನಮುನು ದುಃಖ ಮಂದನೇಲ

ಈ ದುಃಖ ನಿವೃತ್ತಿಗೇನುಮಾಡಬೇಕು -- ಅದನ್ನೂ ಸೂಚಿಸಿದೆ ಕವಿವಾಣಿ--

ದೇವ ದೇವಂ ಭಜೇ ದಿವ್ಯಪ್ರಭಾವಂ||

* * * * *

# ಯಕ್ಷನಾಗರಿ ತಂಜಾವೂರು

---ಆದ್ಯರಾಮಾಚಾರ್ಯ.

ನಿಸರ್ಗ ರಮಣೀಯ ಕಾವೇರಿ ತೀರದ ತಾಣವೆನಿಸಿದ ಒಂದು ಭೂಭಾಗವನ್ನು ತಂಜಾವೂರು ಪ್ರಾಂತವೆಂದು ಗುರುತಿಸಲಾಗುತ್ತದೆ. ಒಂದು ಕಾಲದಲ್ಲಿ ಫಲವತ್ತಾದ ಈ ನೆಲವನ್ನೆಲ್ಲ ವಿಜಾಪುರದ ಆದಿಲ್ ಶಾಹಿ ಮನೆತನದವರು ಆಳುತ್ತಿದ್ದರು.

ಲೋಕ ವಿಖ್ಯಾತನಾದ ಛತ್ರಪತಿ ಶಿವಾಜಿಯ ತಂದೆಯಾಗಿದ್ದ ಶಹಾಜಿರಾಜ ಭೋಸಲೆ -- ಈತನು ವಿಜಾಪುರದ ದಕ್ಷಿಣದ ಸುಬೇದಾರ್ ಎಂಬ ಹೆಸರಿನಿಂದ ಬೆಂಗಳೂರಿನಲ್ಲಿದ್ದುಕೊಂಡು ಈ ಪ್ರದೇಶವನ್ನೆಲ್ಲ ನೋಡಿಕೊಳ್ಳುತ್ತಿದ್ದನು. ಆತನಲ್ಲಿ ರಘುನಾಥ ಹನುಮಂತೆ ಎಂಬ ಚಾಣಾಕ್ಷನಾದ ಮುತ್ಸದ್ದಿ ಆಶ್ರಿತನಾಗಿದ್ದನು. ಆತನ ಮುಜುಂದಾರಿಕೆಯಲ್ಲಿ ಈ ಭಾಗವು ಸುರಕ್ಷಿತವಾಗಿತ್ತು.

ಮೊಗಲ್ ಸಾಮ್ರಾಟನಾಗಿದ್ದ ಔರಂಗಜೇಬನನ್ನು ಕೆಣಕಿದ ಶಿವಾಜಿಗೆ ಒಂದಿಲ್ಲೊಂದು ದಿನ ಆತನನ್ನೆದುರಿಸದೇಕಾಗಬಹುದೆಂಬ ಹೆದರಿಕೆಯೂ ಇತ್ತು. ಆದುದರಿಂದಲೇ ದಕ್ಷಿಣದ ತುಟ್ಟತುದಿಯಲ್ಲಿರುವ ಜಿಂಜೀ ಕೋಟೆಯನ್ನು ಬಹು ಚಾಣಾಕ್ಷತನದಿಂದ ಆತನು ತನ್ನ ಕೈವಶ ಮಾಡಿಕೊಂಡನು. ಅದೇ ಸಂದರ್ಭದಲ್ಲಿ ಪಿತ್ರಾರ್ಜಿತವಾದ ತಂಜಾವೂರಿನ ಮೇಲೆ ತನ್ನ ಹಕ್ಕೂ ಇದೆ ಎಂಬ ವಾದವನ್ನು ಹೂಡಿದನು. ರಾಜ್ಯವು ದೊರೆಯದೇ ಹೋದಾಗ ತಂದೆ ಧರಿಸುತ್ತಿದ್ದ ಬಿರುದು ಬಾವಲಿಗಳನ್ನಾದರೂ ಪಡೆಯಬೇಕೆಂದು ವಾದಿಸತೊಡಗಿದ. ಆದರೆ ಶಹಾಜಿ ರಾಜನ ಆಶ್ರಯದಲ್ಲಿದ್ದ ಮುತ್ಸದ್ದಿಗಳು ಅದನ್ನೂ ಸಹ ಆತನಿಗೆ ದೊರೆಯದಂತೆ ನೋಡಿಕೊಂಡರು.

ಬೆಂಗಳೂರು ಕೈಬಿಟ್ಟು ಹೋದ ನಂತರ ಶಹಾಜಿಯ ಇನ್ನೊಬ್ಬ ಮಗ (ಈತನು ಶಿವಾಜಿಯ ಮಲ ಸೋದರ) ನಾದ ವೆಂಕೋಜಿಯು ಇಸವಿ ೧೬೭೬ ರಲ್ಲಿ ತಂಜಾವೂರಿನ ಮೇಲೆ ತನ್ನ ಸಂಪೂರ್ಣ ಪ್ರಭುತ್ವವನ್ನು ಸ್ಥಾಪಿಸಿದನು. ಕೊಲ್ಲಾಪುರ, ಸಾತಾರಾ, ಬರೋಡಾ, ನಾಗಪೂರ, ಅಕ್ಕಲಕೋಟ, ಸೊಂಡೂರ ಮೊದಲಾದ ಭಾಗಗಳಲ್ಲಿರುವಂತೆ ತಂಜಾವೂರಿನಲ್ಲಿಯೂ ಸಹ ಮರಾಠರ ರಾಜ್ಯವು ಆರಂಭಗೊಂಡಿತು.

ದಕ್ಷಿಣದಲ್ಲಿ ಬೆಳೆದು ಬಂದ ಈ ಮರಾಠಾ ರಾಜ್ಯವು ಸಂಗೀತ, ಸಾಹಿತ್ಯ, ಲಲಿತಕಲೆ, ಪಂಡಿತರ ಪೋಷಣೆ -ಮೊದಲಾದ ಕಾರ್ಯಗಳಿಂದ ದಕ್ಷಿಣದ ಜನಜೀವನದೊಂದಿಗೆ ಒಂದಾಗಿ ಬೆಳೆಯುವಂತಾಯಿತು. ಇಂದು ಆ ರಾಜ್ಯವು ನಶಿಸಿ ಹೋದರೂ ಸಹ ತಂಜಾವೂರಿನ ಸಂಸ್ಕೃತಿಯು ಮಾತ್ರ ಅಖಿಲಭಾರತದಲ್ಲಿ ಅಚ್ಚಳಿಯದೆ ಉಳಿದುಕೊಂಡು ಬರುವಂತಾಗಿರುವುದು. ಈ ರಾಜ್ಯವು ಇಸವಿ ೧೮೦೦ ರವರೆಗೂ ಅಬಾಧಿತವಾಗಿ ಬೆಳೆದು ಬರುವಂತಾಯಿತು.

ಶಹಾಜಿ ರಾಜನ ಕಾಲಾವಧಿಯಲ್ಲಿ ಕರ್ನಾಟಕ ಹಾಗೂ ತಮಿಳುನಾಡು ಈ ಪ್ರದೇಶಕ್ಕೆ ಸಾಕಷ್ಟು ಪ್ರಮಾಣದಲ್ಲಿ ಅನೇಕ ಕುಟುಂಬಗಳು ವಲಸೆ ಬಂದು ನೆಲೆಸುವಂತಾದವು. ಅದರಲ್ಲಿ ವಿಶೇಷವಾಗಿ ಬ್ರಾಹ್ಮಣ ವರ್ಗದವರನ್ನು ದೇಶಸ್ಥರು ಎಂದು ಗುರುತಿಸುವ ಸಂಪ್ರದಾಯವು ನಡೆದುಕೊಂಡು ಬಂದಿರುವುದು. ಬ್ರಾಹ್ಮಣ ವರ್ಗದವರಂತೆ ಅನೇಕ ಸರದಾರರು, ಸಾಮಂತರು, ಕಲಾವಿದರು, ಇವರೇ ಮೊದಲಾದವರ ಆಗಮನವಾಯಿತು. ಇದರಿಂದಾಗಿ ಕರ್ನಾಟಕ ಅಥವಾ ಮೈಸೂರಿನೊಂದಿಗೆ ತಂಜಾವೂರಿನ ಸಂಬಂಧವು ವಿಶೇಷವಾಗಿ ಇಂದಿಗೂ ಬೆಳೆದುಕೊಂಡು ಬರುವಂತಾದುದು ವಿಶೇಷದ ಸಂಗತಿಯಾಗಿರುವುದು.

ರಾಜ್ಯದ ಮುಖ್ಯ ಸ್ಥಳವೆನಿಸಿದ ತಂಜಾವೂರಿನಲ್ಲಿ ಬಹು ಸುಂದರವಾದ, ಅಷ್ಟೇ ಆಶ್ಚರ್ಯಕರವಾದ ರೀತಿಯಲ್ಲಿ ನಿರ್ಮಿತವಾದ ಬೃಹದೇಶ್ವರ ದೇವಾಲಯವಿರುವುದು. ಈ ದೇವಾಲಯದಲ್ಲಿ ತಂಜಾವೂರನ್ನಾಳಿದ ಅರಸು ಮನೆತನವನ್ನು ಕುರಿತು ಬಿಡಿಸಲಾದ ಬೃಹದಾಕಾರದ ಲೇಖನವಿ



ರುವುದು. ಈ ಲೇಖನವನ್ನು ಚೆನ್ನಾಗಿ ಅಭ್ಯಾಸ ಮಾಡಿದಲ್ಲಿ ಅಂದಿನ ಕಾಲದ ರಾಜಕೀಯ ರೀತಿ ನೀತಿಗಳು ರಾಜ್ಯಕ್ಕಾಗಿ ಸೇವೆ ಸಲ್ಲಿಸಿದ ಸರದಾರರ ಹೆಸರು, ರಾಜ್ಯದ ಕೀರ್ತಿ ಬೆಳೆಸಲು ಶ್ರಮಿಸಿದ ಅಧಿಕಾರ ವರ್ಗದವರ ನಾಮಧೇಯಗಳು ಹಾಗೂ ರಾಮದಾಸ ಸಂಪ್ರದಾಯವನ್ನು ಬೆಳೆಸಲು ಕಾರಣರಾದ ರಾಘವಸ್ವಾಮಿ, ಭೀಮಸ್ವಾಮಿ, ಮೌನೀಸ್ವಾಮಿ, ಮೇರುಸ್ವಾಮಿ, ಮಾಧವಸ್ವಾಮಿ, ಸೇತು ಮಾಧವಸ್ವಾಮಿ, ಮೊದಲಾದವರ ಹೆಸರುಗಳನ್ನೂ ಸಹ ನಾವು ಈ ಲೇಖನದಲ್ಲಿ ಕಾಣಬಹುದು.

ಈ ರಾಜ್ಯದ ಸೇವೆಯಲ್ಲಿದ್ದ ಸರದಾರರಲ್ಲಿ ಘಾಟಗೆ, ಗೌಡೇವರ, ಶೇಡಗೆ, ಜಗತಾಪ, ಮಹಡೀಕ, ಸೂರ್ಯವಂಶಿ, ಮೋಹಿತೆ, ಮೊದಲಾದವರ ಹೆಸರುಗಳನ್ನೂ ಕಾಣಬಹುದಾಗಿದೆ. ಈ ರಾಜ್ಯದಲ್ಲಿ ಪ್ರಮುಖ ಅಧಿಕಾರಿಗಳಾಗಿ ನಾರೋಪಂತ, ಡಬೀರ್, ಭಗವಂತರಾಯ, ಆತನ ಮೊಮ್ಮಗ ವಿಠ್ಠಲ ಅಮಾತ್ಯ ಬಾಬೂರಾಯ ಇವರ ಹೆಸರುಗಳಿವೆ.

ತಂಜಾವೂರಿನ ಅರಸು ಮನೆತನದಲ್ಲಿ ವೆಂಕೋಜಿಯಿಂದ ಆರಂಭ ಮಾಡಿಕೊಂಡು ತುಳಜೋಜಿ ಅಥವಾ ತುಳಜೇಂದ್ರರಾಜನ ಕಾಲಾವಧಿಯವರೆಗೆ ಅಂದರೆ ಇಸವಿ ೧೬೭೫ ರಿಂದ ೧೭೬೫ ರ ಕಾಲಾವಧಿಯವರೆಗೆ ಗಂಗಾಧರ ಬಾಬಾಜಿ ಹಾಗೂ ಆತನ ಮಗನಾದ ತ್ರಂಬಕರಾಯ, ಮೊಮ್ಮಗನಾದ ಆನಂದರಾಯ ಮೊದಲಾದವರು ಈ ಅರಸು ಮನೆತನಕ್ಕೆ ಅಗಾಧವಾದ ಸೇವೆ ಸಲ್ಲಿಸಿದರೆಂಬುದು ಶಿಲಾಲೇಖನದ ಅಭ್ಯಾಸದಿಂದ ತಿಳಿದು ಬರುವುದು. ರಾಜ್ಯದ ವ್ಯವಸ್ಥೆಯನ್ನು ಕುರಿತಾಗಿಯೂ ಕೆಲವು ಮಾಹಿತಿಗಳು ಕಾಣಸಿಗುವವು. ಈ ಭಾಗದ ಪ್ರದೇಶಗಳಿಗೆಲ್ಲಾ ರಾಜನೇ ಪರದೈವ ಎಂಬ ಸಂಬೋಧನೆಗಳಿದ್ದುದು ಕಾಣಸಿಗುವುದು. ಆತನ ಆಶ್ರಿತರಾಗಿ ಅಮಾತ್ಯ ಪದವಿಯಲ್ಲಿ ವಂಶ ಪಾರಂಪರ್ಯ ಸೇವೆ ಮಾಡಿದವರೂ ಉಂಟು. ಇವರು ಕೆಲವು ಸಂದರ್ಭದಲ್ಲಿ ಆಪ್ತ ಸಲಹೆಗಾರರಾಗಿಯೂ ಮತ್ತೆ ಕೆಲವು ವೇಳೆ ಖಡ್ಗಧಾರಿಗಳಾಗಿಯೂ, ಸೇನಾ ಪ್ರಮುಖರಾಗಿಯೂ ಸೇವೆಗೈದಿದ್ದಾರೆ. ಸೇನಾಧಿಕಾರಿಯನ್ನು ದಳವಿ ಎಂದು ಅಥವಾ ದಳಪತಿ ಎಂದು ಸಂಬೋಧಿಸಲಾಗಿದೆ. ಗಂಗಾಧರ ಪಂತರ ಮೊಮ್ಮಗನಂತೂ ಸಾಮಾನ್ಯ ಸೇವೆಯಿಂದ ಅತ್ಯುನ್ನತವಾದ ಪದವಿಯನ್ನು ತಲುಪಿದ ವಿಚಾರವಿದೆ. ಈತನು ರಾಮನಾಡಿನಲ್ಲಿ ನಡೆದ ಯುದ್ಧದಲ್ಲಿ ತನ್ನ ಅತುಲ ಪರಾಕ್ರಮ ತೋರಿಸಿ ಮೆರೆದಿದ್ದಾನೆ. ಧರ್ಮಾಧಿಕಾರಿಯಾಗಿ ಕೆಲಸವನ್ನಾರಂಭಿಸಿದ ಈತನು ಪಂತ ಪ್ರಧಾನ ಪದವಿಯನ್ನು ಹೊಂದಿದ್ದಾನೆ.

ದಕ್ಷಿಣಾಪಥವನ್ನೆಲ್ಲ ಪಾದಾಕ್ರಾಂತ ಮಾಡಿಕೊಳ್ಳುವ ಹಂಬಲದಿಂದ ದಕ್ಷಿಣಕ್ಕಿಳಿದ ಔರಂಗಜೇಬನೊಂದಿಗೆ ಸಂಧಿ ಮಾಡಿಕೊಳ್ಳಲು ವೆಂಕೋಜಿಯ ದಾಸೀಪುತ್ರನಾದ ರಾಯಬಾನು ಸಿಂಗ ಎಂಬಾತನು ಪುಣೆಯಿಂದ ಬಂದು ಬಾದಶಹನೊಂದಿಗೆ ಭೇಟಿಯಾಗಿ ಹೋದನೆಂಬುದು ಈ ಶಿಲಾಲೇಖನದಿಂದ ತಿಳಿದು ಬರುತ್ತದೆ.

ಸಂಸ್ಕೃತ ಸಾಹಿತ್ಯದಲ್ಲಿ ಮೇರು ಕೃತಿಗಳನ್ನು ರಚಿಸುವುದು, ಸಂಗೀತ ಶಾಸ್ತ್ರದಲ್ಲಿ, ನಾಟ್ಯಶಾಸ್ತ್ರದಲ್ಲಿ, ಅಶ್ವಶಾಸ್ತ್ರ, ಗಜಶಾಸ್ತ್ರ, ಆಯುರ್ವೇದ ಮೊದಲಾದ ವಿಷಯಗಳನ್ನು ಕುರಿತು ಅನೇಕ ಪಂಡಿತರಿಂದ ಗ್ರಂಥಗಳನ್ನು ರಚಿಸುವುದರಲ್ಲಿಯೂ ಹಾಗೂ ಅಗ್ರಹಾರಗಳ ನಿರ್ಮಾಣ, ಅನ್ನಸತ್ರಗಳನ್ನು ನಡೆಸುವುದು, ಪಂಡಿತರಿಗೆ ಆಶ್ರಯ ಲಭಿಸುವಂತೆ ನೋಡಿಕೊಳ್ಳುವುದು --ಇವೇ ಮೊದಲಾದ ಕಾರ್ಯಕ್ರಮಗಳಲ್ಲಿ ಗಂಗಾಧರ ಪಂತ, ತ್ರಂಬಕಪಂತ ಹಾಗೂ ಆನಂದರಾಯ ಇವರ ಪಾತ್ರವು ವಿಶೇಷವಾಗಿತ್ತೆಂಬುದು ತಿಳಿದು ಬರುತ್ತದೆ. ಸ್ವತಃ ಅರಸರೇ ಸಂಗೀತ ಶಾಸ್ತ್ರದಲ್ಲಿ, ಸಂಸ್ಕೃತಾಭ್ಯಾಸದಲ್ಲಿ ವಿಶೇಷ ಪರಿಣತರಾಗಿದ್ದರು. ಇವರ ಕಾಲಾವಧಿಯಲ್ಲಿ ರಘುನಾಥ ಹನುಮಂತೆ, ಧುಂಡಿರಾಜ ವ್ಯಾಸ, ಜಗನ್ನಾಥ, ಬಾಲಕೃಷ್ಣ ಉಗಾವತಾರ ಹಾಗೂ ಭಾಸ್ಕರವಿಲಾಸ ಎಂಬ ಗ್ರಂಥವನ್ನು ರಚಿಸಿದ ವಿಠ್ಠಲ ಅಮಾತ್ಯ ಇವರಿಂದಲೂ ಅನೇಕ ಉದ್ಗ್ರಂಥಗಳು ರಚನೆಗೊಂಡಿವೆ. ರಾಜಾ ತುಳಜೇಂದ್ರನ ಕಾಲದಲ್ಲಿ ಡಬೀರ ನಾರೋಪಂತರ ಹೆಸರು ವಿಶೇಷ ರೀತಿಯಲ್ಲಿ ಕಾಣಬರುತ್ತದೆ. ಡಬೀರ -- ಈ ಶಬ್ದವು ಫಾರಸೀ ಭಾಷೆಯಿಂದ ಬಂದುದಾಗಿದೆ. ಇವರು ಲೇಖನ ಸಾಹಿತ್ಯವನ್ನು ರೂಢಿಸಿದವರು. ರಾಜ್ಯದ ಲೇಖನ ವ್ಯವಹಾರಗಳಿಗೆಲ್ಲ ಪ್ರಥಮ ಸ್ಥಾನವನ್ನು ಹೊಂದಿದವರು. ಧರ್ಮಾಧಿಕಾರಿಯ ಹುದ್ದೆಯು ಕೋಶಾಧಿಕಾರಿಗೆ ಸಮನಾದುದೆಂದು ಭಾವಿಸುತ್ತಿದ್ದರು. ಇಸವಿ ೧೭೨೮ ರಿಂದ ೧೭೬೫ ರ ಕಾಲಾವಧಿಯಲ್ಲಿ ಘನಶ್ಯಾಮ ಪಂಡಿತನು ರಾಜನ ಖಾಸಗೀ ಕೋಶಾಧಿಕಾರಿಯಾಗಿ ಸೇವೆ ಸಲ್ಲಿಸಿದನು. ಯಾರು ರಾಜನ ಅಂಗರಕ್ಷಕ ದಲದ ಪ್ರಮುಖರೋ ಅಂಥಹವರನ್ನು ಸರಖೇಲ್ ಎಂದು ಕರೆಯುತ್ತಿದ್ದರು. ಅತ್ಯಂತ ವಿಶ್ವಾಸಪಾತ್ರರಾದವರಿಗೆ ಮಾತ್ರ ಈ ಪದವಿಯು ಲಭ್ಯವಾಗುತ್ತಿತ್ತು. ಅಣ್ಣಪ್ಪ ಸೇಗಡೆ ಎಂಬ ಸರಖೇಲ್‌ನು ಕೋಮಲಚೇರಿ ಎಂಬ ಸ್ಥಳದಲ್ಲಿ ನಡೆದ ಯುದ್ಧದಲ್ಲಿ ತನ್ನ ಪರಾಕ್ರಮದಿಂದ ರಾಜನನ್ನು ರಕ್ಷಿಸಿದನೆಂದು ಹೇಳಲಾಗಿರುವುದು.

ಕಿಲ್ಲೇದಾರ್ ಹಾಗೂ ಫೌಜದಾರ ಈ ಹುದ್ದೆಗಳಲ್ಲಿ ಘಾಟಗೆ ಮನೆತನದವರು ಕೆಲಸ ಮಾಡುತ್ತಿದ್ದರು. ಕೆಲ ಸಮಯದವರೆಗೆ ಸಯ್ಯದೆ ಎಂಬುವವನೂ ಸಹ ಕಿಲ್ಲಾಧಿಕಾರಿಯಾಗಿದ್ದನು. ಇಸವಿ ೧೭೭೦ ರಲ್ಲಿ ಆಂಗ್ಲರು ತಂಜಾವೂರ ಜಿಲ್ಲೆ ಹಾಗೂ ಅರಮನೆಗಳನ್ನು ತಮ್ಮ ಹತೋಟಿಗೆ ತೆಗೆದುಕೊಂಡರು.

ಈ ರಾಜ್ಯವು ಸುಮಾರು ಆರೇಳು ನೂರು ಚದರ ಮೈಲು ಹರಡಿಕೊಂಡಿತ್ತು. ಇದರಲ್ಲಿ ಪಟ್ಟುಕೊಟ್ಟಾಯಿ, ಮನ್ನಾರಗುಡಿ, ಮಾಯಾವರಮ್, ಕುಂಭಕೋಣಮ್, ತಿರುವಾಡಿ ಎಂಬ ಭಾಗಗಳಿದ್ದವು. ಈ ಭಾಗದ ಮೇಲ್ವಿಚಾರಕನನ್ನು ಸುಬೇದಾರ ಎಂದೆನ್ನುತ್ತಿದ್ದರು. ಇವು ನಮ್ಮಲ್ಲಿಯ ತಾಲ್ಲೂಕು, ಮಹಲ್, ಪೇಠಾಗಳಷ್ಟಿದ್ದವು. ಈ ಭಾಗದಲ್ಲಿ ಕಂದಾಯವನ್ನು ವಸೂಲಿ ಮಾಡುವವರಿಗೆ ಅಮಿಾನ್ ಎಂದು ಕರೆಯುವ ಸಂಪ್ರದಾಯವಿತ್ತು. ರಾಜ್ಯದ ಆದಾಯವು ಕೃಷಿಯನ್ನೇ ಪ್ರಧಾನವಾಗಿ ನಂಬಿಕೊಂಡಿತ್ತು. ಜಮಾಬಂದಿಯ ವ್ಯವಸ್ಥಾಪಕರನ್ನು ದಿವಾಣರೆಂದು ಗುರುತಿಸುತ್ತಿದ್ದರು.

ಕನ್ನಡ, ತಮಿಳು, ತೆಲುಗು, ಸಂಸ್ಕೃತ, ಮರಾಠಿ ಭಾಷೆಗಳಲ್ಲಿ ಅನೇಕ ಗ್ರಂಥಗಳ ರಚನೆಗಳಾಗಿರುವುವು. ಸ್ವತಃ ರಾಜನಿಂದಲೇ ಉರ್ದು ಹಾಗೂ ತಮಿಳು ಭಾಷೆಗಳಲ್ಲಿ ನಾಟಕಗಳು ರಚನೆಯಾಗಿವೆ. ಈ ಎರಡೂ ಭಾಷೆಗಳಲ್ಲಿ ಕೃತಿರಚನೆ ಮಾಡಿರುವುದರಿಂದ ಈ ರಾಜರು ನಾಟಕಗಳ ರಚನೆಯಲ್ಲಿ ಅಧ್ವಪ್ರವೃತ್ತರೆನಿಸಿಕೊಂಡಿದ್ದಾರೆ. ಇಷ್ಟೇ ಅಲ್ಲದೆ ಸ್ವತಃ ಅವರು ಸಂಗೀತ ಶಾಸ್ತ್ರದಲ್ಲಿ ಹಾಗೂ ಗೀತ ವಾದ್ಯಗಳಲ್ಲಿ ಮಹಾ ಪರಿಣತರೆನಿಸಿಕೊಳ್ಳುತ್ತಿದ್ದರು. ರಾಜಾ ಸರ್ಫೋಜಿ ಹಾಗೂ ಪ್ರತಾಪ ಸಿಂಹರಿಂದ ಅನೇಕ ಕೃತಿ ರಚನೆಗಳಾಗಿದ್ದು ಇಂದಿಗೂ ಆ ಕೃತಿಗಳು ಪ್ರಸಾರದಲ್ಲಿವೆ.

ದಕ್ಷಿಣ ಭಾರತದಲ್ಲಿ ತಂಜಾವೂರು ಸುಸಂಸ್ಕೃತ ರಾಜ್ಯವಾಗಿತ್ತು. ಅನೇಕ ಪಂಡಿತರ ಆಶ್ರಯಸ್ಥಾನವೆಂದೆನಿಸಿಕೊಂಡಿತ್ತು. ಇಲ್ಲಿಯ ರಾಜರಿಂದ ಸಂಗ್ರಹಿತವಾದ ಗ್ರಂಥಗಳು ಜಗತ್ಪ್ರಸಿದ್ಧವಾದ ಸರಸ್ವತಿ ಗ್ರಂಥಾಲಯದಲ್ಲಿ ಇಂದಿಗೂ ಕಾಣಬರುವಂತಾಗಿರುವುವು. ಇಸವಿ ೧೮೫೫ ರಲ್ಲಿ ಇದು ಸಂಪೂರ್ಣವಾಗಿ ತನ್ನ ಅಧಿಕಾರವನ್ನು ಕಳೆದುಕೊಂಡಿತು. ಹಿಂದಿನವರು ಮಾಡಿದ ಸೇವೆಯಿಂದ ಇಂದಿಗೂ ತಂಜಾವೂರು ಪ್ರವಾಸಿ ಅಭ್ಯಾಸಿಗರಿಗೆ ಯಕ್ಷನಗರಿಯಾಗಿಯೇ ತೋರಿಬರುವುದು.



# ಯಾಮುನಾಚಾರ್ಯರ ಸ್ತೋತ್ರ ರತ್ನ

---ಡಾ|| ವಿ. ಎಸ್. ಸಂಪತ್ಕುಮಾರಾಚಾರ್ಯ.

(ಮುಂದುವರಿದುದು)

ತತ್ವೇನ ಯಸ್ಯ ಮಹಿಮಾರ್ಣವ ಶೀಕರಾಣುಃ
ಶಕ್ಯೋ ನ ಮಾತುಮಪಿ ಶರ್ವ ಪಿತಾಮಹಾದ್ಯೈಃ
ಕರ್ತುಂ ತದೀಯ ಮಹಿಮಸ್ತುತಿಮುದ್ಯತಾಯ
ಮಹ್ಯಂ ನಮೋಸ್ತು ಕವಯೇ ನಿರಪತ್ರಪಾಯ

ಭಾವಾರ್ಥ : ಯಾವ ನಾರಾಯಣನ ಮಹಿಮೆಯೆಂಬ ಅಪಾರವಾದ ಸಮುದ್ರದ ತುಂತುರುವಿನ ಅಣುಭಾಗವನ್ನು ಕೂಡ ಬ್ರಹ್ಮಾದಿಗಳಿಗೆ ಅಳಿಯುವುದು ಸಾಧ್ಯವಿಲ್ಲವೋ, ಅಂತಹವನ ಮಹಿಮೆಯನ್ನು ಸ್ತುತಿ ಮಾಡಲು ತೊಡಗಿಯೂ ಲಜ್ಜೆ ಪಡದಿರುವ ಕವಿಯಾದ ನನಗೆ ನಮಸ್ಕಾರವಿರಲಿ.

ವಿಶೇಷಾರ್ಥ : ಈ ಪರಮಾರ್ಥವನ್ನು ತಾತ್ವಿಕವಾಗಿ ಗಹ್ರಹಿಸಬಲ್ಲ ವ್ಯಕ್ತಿ ಒಬ್ಬನೂ ಕಣ್ಣಿಗೆ ಕಾಣುವುದಿಲ್ಲ. ಅವರಲ್ಲಿ ಮುಖ್ಯವಾದವರು ಜ್ಞಾನಾಗ್ರಣಿಯಾದ ಈಶ್ವರ ಮತ್ತು ಅದಕ್ಕೆ ಅನುಗುಣವಾದ ಶರೀರ ಸನ್ನಿವೇಶ ಒದಗಿಸುವ ಬ್ರಹ್ಮಪಿತಾಮಹ. ಒಂದು ವೇಳೆ ಭಗವಂತನನ್ನು ಕೊಂಡಾಡಬೇಕಾದರೆ, ಅವನನ್ನು ಬಳಸಿಕೊಂಡರೆ ಅವನೂ ಸಮ್ಮಂತೆಯೇ ಮಿಣುಕುಹುಳು ಆಗುತ್ತಾನೆ. ಇಂಥ ಅಪ್ರತಿಮ ಪ್ರಭಾವವುಳ್ಳ ಪರಮಾತ್ಮನನ್ನು ಜ್ಞಾನಸ್ವರೂಪಿ ಎಂಬ ಭಾವನೆಯಿಂದ ಭಗವದ್ವರ್ಣನೆಯಲ್ಲಿ ಹೆಮ್ಮೆಪಡುವ ಅವಕಾಶವೂ ತನಗೂ ಲಭಿಸಬೇಕೆಂಬ ಧೋರಣೆ ಆಗಾಗ್ಗೆ ತೋರುತ್ತದೆ. ಈ ಭಾವನೆ ಸರ್ವಥಾ ಅನುಚಿತ. ಲೋಕದಲ್ಲಿ ಹುಟ್ಟಿ ಅಸದೃಶ ವ್ಯಕ್ತಿಯಾಗಿ ತೋರಿಸಿಕೊಳ್ಳಬೇಕೆಂಬ ಈ ವೃತ್ತಿ ತನ್ನಲ್ಲಿ ಮೂಡಿದೆ. ತನಗೆ ನಾಚಿಕೆಯಾಗುತ್ತದೆ. ಮಹ್ಯಂ ನಮೋಸ್ತು -- ತನಗೆ ನಮಸ್ಕಾರ -- ಇದು ಎಂದೆಂದಿಗೂ ಉಂಟಾಗದಿರಲಿ ಎಂಬ ಭಾವನೆಯನ್ನು ವ್ಯಕ್ತಪಡಿಸುವುದಕ್ಕಾಗಿ ತನಗೆ ನಮಸ್ಕಾರ ಎಂದು ಗೌರವ ರೀತಿಯಲ್ಲಿ ಈ ಅವಸ್ಥಾ ಸಂಪ್ರಾಪ್ತಿಯನ್ನು ಆಚಾರ್ಯರು ಕೊನೆಗಾಣಿಸುತ್ತಾರೆ.

ಶಾಸ್ತ್ರದಲ್ಲಿ ಪ್ರತಿಪಾದಿಸಿರುವಂತೆ ವಿವೇಕಿಯ ಮನಸ್ಸಿನಲ್ಲಿ ಮೂರು ವಿಧವಾದ ಭಾವನೆಗಳು ಕಾಣಿಸಿಕೊಳ್ಳುತ್ತವೆ. ಇವೇ ತತ್ವಗಳು ಮತ್ತು ಅವುಗಳಿಗೆ ಏರ್ಪಟ್ಟಿರುವ ಹೊಂದಾಣಿಕೆ. ಶಾಸ್ತ್ರದಲ್ಲಿ ಈ ಪ್ರಕರಣವನ್ನು ತತ್ವತ್ರಯ, ಅರ್ಥ ಪಂಚಕ ಎಂಬುದಾಗಿ ವರ್ಣಿಸಿದ್ದಾರೆ. ಈ ತತ್ವಗಳಲ್ಲಿ ಜ್ಞಾನರಹಿತವಾದ ಅಚೇತನವು ಸರ್ವಗೋಚರ. ಆದಕಾರಣ ಅಚೇತನ ತತ್ವದ ಸುರಕ್ಷಣೆ, ಬೆಳವಣಿಗೆಗೆ ಎಲ್ಲ ವಿಧವಾದ ಪ್ರಯತ್ನಗಳನ್ನು ಕೈಗೊಳ್ಳಲಾಗಿದೆ. ಇದನ್ನು ಸಾಮಾನ್ಯವಾಗಿ ಸಾಮಾಜಿಕವಾದವೆನ್ನುತ್ತಾರೆ. ಅಚಿತ್ ತತ್ವಕ್ಕೆ ಪೂರ್ಣಪ್ರಾಶಸ್ತ್ಯ ನೀಡಿ ಚೇತನೇಶ್ವರ ತತ್ವಗಳು ಅದಕ್ಕೆ ಬಲಿಯಾಗುವುದರಿಂದ ನಿರೀಶ್ವರವಾದ ಅಥವಾ ಅಚೇತನವಶ್ಯಚೇತನವಾದವೂ ತಲೆದೋರುವುದು.

ಅಚಿತ್ತಿಗೆ ಜ್ಞಾನವಿಲ್ಲದರಿಂದ ಕೇವಲ ಜ್ಞಾನಮಯನಾದ ಚೇತನನು ಬೇರೆಯಾಗಿ ಕಾಣುತ್ತಾನೆ. ಅವನಿಗೆ ಸ್ವರೂಪ ವಿಕಾರವಿಲ್ಲ. ಎಂದಿಗೂ ಏಕರೂಪ. ಇದರಿಂದ ನಿತ್ಯವಸ್ತು ಸದಾ ಕಾಣಿಸಿಕೊಳ್ಳುತ್ತದೆ. ಆದರೆ ಅದರ ಧರ್ಮವಾದ ಜ್ಞಾನಕ್ಕೆ ಸ್ಥಿರವಾದ ನೋಟವಿಲ್ಲದೆ ನೆಮ್ಮದಿ ಬರುವುದು ದುಸ್ಸಾಧ್ಯ. ಆದ್ದರಿಂದ ತತ್ವತ್ರಯವು ಒಕ್ಕೂಟದಲ್ಲಿ ಉಳಿದುಕೊಂಡರೆ ಯಾವ ಭಂಗವೂ ಬದಲಾವಣೆ ಆಗುವುದಿಲ್ಲ. ಆದ್ದರಿಂದ ತತ್ವತ್ರಯದಲ್ಲಿ ಪರಸ್ಪರ ಹೊಂದಾಣಿಕೆ ಏರ್ಪಡಬೇಕಾದರೆ ಅರ್ಥಪಂಚಕವೆಂಬ ಕೊಡುಗೆ ಮತ್ತು ತಡೆ ಇವುಗಳ ಬಳಕೆ ಬೇಕು. ಇದರಲ್ಲಿ ಎರಡನೆಯದಾದ ಚೇತನನಿಗೆ ನೆಮ್ಮದಿಯುಂಟಾಗಬೇಕಾದರೆ, ಸ್ವತಃ ಶಕ್ತಿ ಸಾಮರ್ಥ್ಯವಿಲ್ಲದಿರುವುದರಿಂದ, ಆಸೆ ಮಾತ್ರವಿರುವುದರಿಂದ, ಅಚೇತನ ಸಂಪರ್ಕ ತೊರೆದು ಈಶ್ವರ ಸಹಾಯದಿಂದ ಮನೋರಥ



ವನ್ನು ಈಡೇರಿಸಿಕೊಂಡು ತನ್ನ ಜ್ಞಾನಕ್ಕೆ ಯಾವವಿಧವಾದ ಅಂಟೂ ಇಲ್ಲದಂತಿರುವ ಅಕಳಂಕತ್ವಭಾವ ಕಂಡು ಅದನ್ನು ನಿರಂತರವಾಗಿ ಉಳಿಸಿಕೊಂಡು ಬರುವುದಾಗಿದೆ. ಇದು ಕೈವಲ್ಯ ಅಂದರೆ ಪ್ರಕೃತಿ ಸಂಗತ್ಯಾಗ, ಸಂಗ ಜನಿತದೋಷ ನಿರ್ಮೂಲನೆ. ಸಹಜವಾದ ಅಕಳಂಕಸ್ಥಿತಿಯ ಪುನಃಪ್ರಾಪ್ತಿ ಮತ್ತು ಅದರ ನಿತ್ಯಾನುಭವ. ಈಶ್ವರ ಸಹಾಯದಿಂದ ಒದಗುವ ಈ ಸ್ಥಿತಿ.

ಈಶ್ವರ ತತ್ವವನ್ನು ವಿಭುಪ್ರತ್ಯನೀಕತ್ವ, ಕಲ್ಯಾಣೈಕತಾನತ್ವ ಎಂದು ಸಂಕ್ಷೇಪವಾಗಿ ಈಶ್ವರ ಪ್ರಭಾವವನ್ನು ವರ್ಣಿಸಲಾಗಿದೆ. ಅಚೇತನವಾಗಲೀ ಅಥವಾ ಚೇತನವಾಗಲಿ ಈ ತತ್ವಕ್ಕೆ ಅಡಗಿದರೆ ಇಷ್ಟಪ್ರಾಪ್ತಿ, ಅನಿಷ್ಟ ನಿವೃತ್ತಿ ನಿಸ್ಸಂದೇಹ. ಈಶ್ವರನ ವಶೀಕರಣ ಸಾಮರ್ಥ್ಯದಿಂದ ತಪ್ಪಿಸಿಕೊಳ್ಳಲು ಚಿದಚಿದ್ವಸ್ತುಗಳಿಗೆ ಸಾಧ್ಯವಿಲ್ಲ. ಇದು ಈಶಾವಾಸ್ಯಂ ಎಂಬ ಉಪನಿಷತ್ತಿನಲ್ಲಿ ಕಂಡು ಬಂದು ಕೊನೆಯಲ್ಲಿ ಸಾಪ್ತ -- ಜೀವನದ ಬಗ್ಗೆ ತ್ಯಕ್ತೇನ ಭುಂಜೀಥಾಃ ಮಾ ಗೃಧಃ ಕಸ್ಯಸ್ವಿತ್ ಧನಂ -- ಎಂಬುದಾಗಿ ಬುದ್ಧಿವಾದ ಏರ್ಪಟ್ಟಿದೆ. ಅಂದರೆ ಆಸೆಯನ್ನು ದುರಾಸೆಗೆ ಒಳಪಡಿಸಬೇಡ; ಈಶ್ವರನನ್ನು ಮರೆಯಬೇಡ; ನೆಮ್ಮದಿ ತಪ್ಪುವುದಿಲ್ಲವೆಂದು ಹೇಳಿ ವೈರಾಗ್ಯಭೂಷಿತವಾದ ನಿಲುವನ್ನು ಚೇತನನಿಗೆ ಮನದಟ್ಟಾಗುವಂತೆ ತೋರಿಸಲಾಗಿದೆ. ಇದೇ ಸಂನ್ಯಾಸ -- ಪೂರ್ಣತ್ಯಾಗ. ಚೇತನನಲ್ಲಿ ಈಶ್ವರನಿಗೆ ನಾನು ಅಡಿಯಾಳು ಎಂಬ ಭಾವನೆ ಮೂಡಲು ಅಡಚಣೆಯಾಗಿರುವ ನಾನು ಎಂಬ ಸ್ವಪ್ರಾಧಾನ್ಯದ ದುಷ್ಪರಿಣಾಮ ತೊಡೆದು ಹೋಗಬೇಕು. ಈ ಅಹಂಭಾವ ಈಶ್ವರನಿಗೆ ಮೀಸಲಾದುದು. ಆರೋಹಣ ಪಥದಲ್ಲಿ ಮೊಟ್ಟಮೊದಲು ತೋರಿಸಿಕೊಳ್ಳುವುದು ಅಚಿತ್ ತತ್ವ, ನಂತರ ಚೇತನತತ್ವ, ಕೊನೆಯಲ್ಲಿ ಈಶ್ವರ ತತ್ವ ಎಂದು ಏರ್ಪಟ್ಟರೆ ಅಚಿತ್, ಚೇತನ ವಿಷಯವಾದ ವೈರಾಗ್ಯವೇರ್ಪಟ್ಟು ಈಶ್ವರನ ವಿಷಯವಾದ, ವಿಶೇಷವಾದ ಸರ್ವದಾ ಹೊಳೆಯುತ್ತಿರುವುದು ತತ್ವತ್ರಯದ ಸೋಪಾನದ ಸ್ವಭಾವಕ್ಕೆ ಅನುಗುಣವಾಗಿ ಏರ್ಪಡುವ ಸನ್ನಿವೇಶ. ಈ ತತ್ವದ ಅರಿವು ಪೂರ್ಣವಾಗಿ ಏರ್ಪಟ್ಟು ಅದರ ಪ್ರಭಾವ ತಿಳಿದಮೇಲೆ ಸನ್ಮಾರ್ಗದಲ್ಲಿ ಉಳಿದುಕೊಳ್ಳುವುದು ಸಾಧ್ಯ.



# ತಿ. ತಿ. ದೇವಸ್ಥಾನಗಳು, ತಿರುಪತಿ.
# ಪ್ರಕಟನ ಶಾಖೆ

## ಮಾರಾಟಕ್ಕೆ ಸಿದ್ಧವಾಗಿರುವ ಅಮೂಲ್ಯ ಧಾರ್ಮಿಕ ಗ್ರಂಥ ರಾಶಿ

### ಕನ್ನಡ:

ಶ್ರೀನಿವಾಸನ ಹಾಡುಗಳು-ಭಾಗ-೨ (ಶ್ರೀಪಾದರಾಜರು, ವ್ಯಾಸರಾಯರು, ವಾದಿರಾಜರು, ಕನಕದಾಸರು) ೪-೫೦
ಸೃಷ್ಟಿಪ್ರಕರಣ (ದಾಸಸಾಹಿತ್ಯದಲ್ಲಿ ವಿವರಿಸಿದಂತೆ) -ವಿ. ಬಾದರಾಯಣ ಮೂರ್ತಿ ೧೨-೫೦
ಪುರಂದರೋಪನಿಷತ್ (ಪುರಂದರದಾಸರ ಏಳು ಕೃತಿ ವಿವರಣೆ) -ಬನ್ನಂಜೆ ಗೋವಿಂದಾಚಾರ್ಯ ೭-೦೦
ಕೇಶವಾದಿ ರೂಪಗಳು (ಕನ್ನದ, ತೆಲುಗು, ಆಂಗ್ಲ, ಹಿಂದಿ, ಚಿತ್ರವಿವರಣೆ) -ಸಂ. ಕೆ. ಅಪ್ಪಣ್ಣಾಚಾರ್ಯ ೩-೭೫
ಕರ್ನಾಟಕ ಹರಿದಾಸರು (ಕನ್ನಡ, ತೆಲುಗು, ಆಂಗ್ಲ, ಹಿಂದಿ, ಚಿತ್ರವಿವರಣೆ) - ಸಂ. ಕೆ. ಅಪ್ಪಣ್ಣಾಚಾರ್ಯ ೨-೨೫
ಸ್ತೋತ್ರ ಕುಸುಮಮಾಲಾ -ಸಂ. ವೆಂಕಟಾಚಲ ೩-೦೦
ಆಚಾರಗಳು ಆಡಂಬರಗಳು -ಕೆ. ಚಂದ್ರಮೌಳಿ ೦-೪೦
ಶ್ರೀ ವೆಂಕಟೇಶ್ವರ ಸುಪ್ರಭಾತ (ವಿವರಣೆ ತಾತ್ಪರ್ಯ) ೦-೫೦
" " (ಕನ್ನಡ ಲಿಪಿಯಲ್ಲಿ) ೦-೧೨

### ಮಕ್ಕಳಿಗಾಗಿ:

ಶ್ರೀಪಾದರಾಜರು -ಎಂ. ಎಸ್. ಗುಂಡೂರಾವ್ ೦-೭೫
ಮಹಿಪತಿದಾಸರು -ಶಾನಭಾಗ ೦-೮೫
ಪ್ರಸನ್ನ ವೆಂಕಟದಾಸರು -ವಿ. ಬಾದರಾಯಣಮೂರ್ತಿ ೦-೮೦
ಗೋಪಾಲದಾಸರು -ರುಕ್ಮಿಣಿಗಿರಿಮಾಜಿ ೦-೭೫

### ಹಿಂದಿ:

ಶ್ರೀ ವೆಂಕಟೇಶ್ವರ ಜೀ ಕೆ ಸುಪ್ರಭಾತ್ ಸ್ತೋತ್ರ -ಡಾ. ಎಂ. ಸಂಗಮೇಶಂ ೦-೨೦
ಶ್ರೀ ವೇಂಕಟೇಶ್ವರ ಸುಪ್ರಭಾತ್ (ಸಚಿತ್ರ) ೧೧-೦೦
ತೀರ್ಥರಾಜ ತಿರುಪತಿ -ಡಾ. ಎಂ. ಸಂಗಮೇಶಂ ೧-೫೦

### ಸಂಸ್ಕೃತ:

ಶ್ರೀ ವೇಂಕಟೇಶ್ವರ ಸುಪ್ರಭಾತಂ ೦-೧೨
ಶ್ರೀ ವೇಂಕಟೇಶ್ವರ ಅಷ್ಟೋತ್ತರ ಸಹಸ್ರನಾಮ ಸ್ತೋತ್ರಾಣಿ ೦-೬೨
ಕಠೋಪನಿಷತ್ -ಡಾ. ಕೆ. ಸಿ. ವರದಾಚಾರಿ ಹಾಗೂ ಡಾ. ಡಿ. ತಾತಾಚಾರ್ಯ ೧೫-೦೦
ಮಾರ್ಕಂಡೇಯ ಸಂಹಿತಾ ೧೮-೦೦
ತತ್ತ್ವಸಂಖ್ಯಾನಂ -ಆರ್. ರಾಮಮೂರ್ತಿ ಶರ್ಮಾ ೨-೦೦
ಬ್ರಹ್ಮಸೂತ್ರ ಭಾಷ್ಯ (ಭಾಗ-೧) -ಆರ್. ರಾಮಮೂರ್ತಿ ಶರ್ಮಾ ೩೦-೦೦
ಅಲಂಕಾರ ಸಂಗ್ರಹ ಸಂ-ಕೆ. ಭಾಸ್ಕರರಾವ್ ೧೬-೦೦
ಸೀತಾರಾಮಾಂಜನೇಯಂ -ಡಾ. ಡಿ. ಅರ್ಕಸೋಮಯಾಜಿ ೫೦-೦೦
ಪ್ರಶ್ನೋಪನಿಷತ್ ೧೧-೦೦
ಶ್ರೀಮತ್ ವೈಖಾನಸೇ ಭಗವಚ್ಛಾಸ್ತ್ರೇ ಕ್ರಿಯಾಧಿಕಾರಃ -ಸಂ-ಡಾ. ಎಸ್. ಬಿ. ರಘುನಾಥಾಚಾರ್ಯ ೨೫-೦೦

೧೦೦೦ ರೂಗಳನ್ನು ಮೀರಿದ ಪುಸ್ತಕಗಳ ಕೊಳ್ಳುವಿಕೆಗೆ ೩೦ಶತಾಂಶ ರಿಯಾಯಿತಿಯೂ, ೫೦೦ ರೂಗಳಿಂದ ೧೦೦೦ ರೂ.ವರೆಗೆ ೨೫ಶತಾಂಶ ರಿಯಾಯಿತಿಯೂ, ೧೦೦ ರೂ.ಗಳಿಂದ ೫೦೦ ರೂ.ವರೆಗೆ ೧೫ಶತಾಂಶ ರಿಯಾಯಿತಿಯೂ ಉಂಟು

ಅಂಚೆವೆಚ್ಚ ಪ್ರತ್ಯೇಕ

ಕೂಡಲೇ ಬರೆಯಿರಿ.

ಸೇಲ್ಸ್‌ವಿಂಗ್ ಆಫ್ ಪಬ್ಲಿಕೇಷನ್ಸ್,
ತಿ. ತಿ. ದೇ. ತಿರುಪತಿ.

ಸರ್ವವಿಧದಲ್ಲೂ ಪರಮೇಶ್ವರ ಪಾರತಂತ್ರ್ಯ ಸಂತತ ಉಳಿದುಬರುವಂತೆ, ಅವನ ಸಂಗ ಕ್ಷಣ ಕಾಲವೂ ತಪ್ಪದಂತೆ ಉಳಿದುಕೊಳ್ಳಬೇಕಾದುದು ಚೇತನನ ಕರ್ತವ್ಯ ಈಶ್ವರತತ್ವ, ಸಂಬಂಧ, ಸ್ವರೂಪ ಜ್ಞಾನ, ವೃತ್ತಿ ಮನೋರಥವಾಗಿರುತ್ತದೆ. ಈ ಭಾವನೆಯ ಅಧಿಕಾರ ಬೇಕಾಗಿಲ್ಲ. ಆದ್ದರಿಂದ ಜನರಲ್ಲಿ ಪರಸ್ಪರ ಮೂಲತಃ ಕೀಳು ಮೇಲು ಭಾವನೆಗೆ ಅವಕಾಶವಿಲ್ಲ. ಭಗವತ್ಸೇವೆ ಸರ್ವಾಧಿಕಾರ ಒಂದು ಪಂಗಡಕ್ಕೆ ಮೀಸಲಾದುದಲ್ಲ. ನಾನು ಎಂಬ ಅಹಂಕಾರ ಭಾವನೆ ಚೇತನನಿಗೆ ಎಂದೆಂದಿಗೂ ಉಂಟಾಗದಿರಲಿ ಎಂದು ಆಚಾರ್ಯರು ಚೇತನನ ಸ್ವರೂಪ, ಸಂಬಂಧ ತತ್ವವನ್ನು ಈ ಶ್ಲೋಕದಲ್ಲಿ ನಿರೂಪಿಸಿದ್ದಾರೆ.

ಯದ್ವಾಶ್ರಮಾವಧಿ ಯಥಾಮತಿ
ವಾ ಅಪಿ ಅಶಕ್ತಃ
ಸ್ತೌಮಿ ಏವಮೇವ ಖಲುತೇಽಪಿ
ಸದಾಸ್ತು ವಂತಃ
ವೇದಾಃ ಚತುರ್ಮುಖ ಮುಖಾಶ್ಚ
ಮಹಾರ್ಣವಾಂತಃ
ಕೋಮಜ್ಜತೋಃ ಅಣು
ಕುಲಾಚಲಯೋಃ ವಿಶೇಷಃ

ಭಾವಾರ್ಥ : ಅಥವಾ ನಾನು ಅಶಕ್ತನೇ ಆಗಿದ್ದರೂ ನಾನು ದಣಿಯುವವರೆಗೂ, ನನಗೆ ತಿಳಿದ ಮಟ್ಟಿಗಾದರೂ ಸ್ತುತಿಸುತ್ತೇನೆ. ಹೀಗೆಯೇ ಅಲ್ಲವೇ ಪ್ರಸಿದ್ಧವಾದ ವೇದಗಳೂ, ಬ್ರಹ್ಮನೇ ಮೊದಲಾದವರೂ ಅವನನ್ನು ಸದಾ ಸ್ತೋತ್ರ ಮಾಡುತ್ತಿರುವುದು? ಮಹಾಸಾಗರದ ಒಳಕ್ಕೆ ಮುಳುಗಿಯೇ ಹೋಗುತ್ತಿರುವ ತೀರ ಸಣ್ಣವಸ್ತುವಿಗೂ ದೊಡ್ಡ ಕುಲಪರ್ವತಕ್ಕೂ ವ್ಯತ್ಯಾಸವೇನು?

ವಿಶೇಷಾರ್ಥ : ಸಂಘದಲ್ಲಿ ಏಕರೂಪವಾಗಿ ತೋರಿದರೂ, ನೋಟನಡೆಗಳ ವೈಷಮ್ಯದಿಂದ ಅರ್ಹತೆಯಲ್ಲಿ ಮೇಲು ಕೀಳು ಭಾವನೆ ಬರುವುದು ಸಹಜ. ಆದರೆ ಈ ಭಾವನೆಯಿಂದ ಪರಸ್ಪರ ವೈಷಮ್ಯ ತೋರಿದರೂ ಗುರಿಯನ್ನು ಸಾಧಿಸುವ ಪ್ರಯತ್ನದಲ್ಲಿ ಎಲ್ಲರೂ ನಿಷ್ಫಲರಾಗಿರುವುದರಿಂದ ಪ್ರಯತ್ನದಲ್ಲಿ ಭೇದವೇ ವಿನಾ ಫಲಪ್ರಾಪ್ತಿಯಲ್ಲಿ ಎಲ್ಲರೂ ಹಿಮ್ಮೆಟ್ಟುವುದರಿಂದ ಈ ಭೇದಕ್ಕೆ ಮನ್ನಣೆ ಅನುಚಿತ. ಹಾಗೆಂದರೆ ಪ್ರಯತ್ನ ತ್ಯಜಿಸಬೇಕೆಂದಿಲ್ಲ. ಪರರ ದೃಷ್ಟಿಯಿಂದ ಕೀಳ್ಮೇಲು ಭಾವನೆಗೆ ಅವಕಾಶವಿಲ್ಲ. ಸಾಯುವುದು ಎಲ್ಲರಿಗೂ ಸಹಜ. ಆದ್ದರಿಂದ ಆಯುಸ್ಸಿನಲ್ಲಿ ಏನನ್ನೂ ಗಳಿಸದಿರುವುದರಿಂದ ಅಲ್ಪಾಯು ಮತ್ತು ದೀರ್ಘಾಯುಗಳಿಗೆ ಏನೂ ವ್ಯತ್ಯಾಸವಿಲ್ಲ. ಈ ಭಾವನೆ ಫಲದೃಷ್ಟಿಯಿಂದ. ಈ ಅಶಕ್ತಿಯ ಅನುಭವದಿಂದ ಪ್ರಯತ್ನವನ್ನೇ ನಿಲ್ಲಿಸಲಾಗುವುದಿಲ್ಲ. ಆದ್ದರಿಂದ ಅದನ್ನು ಕೈಬಿಡಲಾಗುವುದಿಲ್ಲ. ಯತ್ನ ಮಾಡದಿರಕೂಡದು. ಪರಾಲಾಭದೃಷ್ಟಿಯಿಂದ ಪ್ರಯತ್ನ ವಿಶೇಷಗಳಿಗೆ ಏರುಪೇರು ಉಂಟಾದರೆ ಅದಕ್ಕೆ ಮನ್ನಣೆಯಿಲ್ಲ. ಆ ಕಾರಣದಿಂದ ಭಗವಂತನ ಅಪ್ರತಿಮವಾದ ಸ್ವರೂಪಗುಣಗಳ ವಿಷಯದಲ್ಲಿ ಅಂದರೆ ಅಹಂತಾ ಮತ್ತು ಮಮತಾ ಭಾವನೆಯಲ್ಲಿ ಅಪೌರುಷೇಯವಾದ ವೇದಗಳಲ್ಲಿ ಅತಿ ಪರಿಮಿತವಾದ ಅರಿವು ಪಡೆದವನು ಗುರಿಯನ್ನು ಮುಟ್ಟಲಾಗಲಿಲ್ಲ ಎಂಬ ಒಂದೇ ಕಾರಣದಿಂದ ಪರಸ್ಪರ ವೈಷಮ್ಯದಿಂದ ಭೇದಭಾವನೆ ಬೆಳೆಸಿಕೊಂಡು ಅಜ್ಞಾನ ಉಳಿಸಿಕೊಳ್ಳುವ ಈ ದೃಶ್ಯ ಮನ್ನಣೆಗೆ ಗುರಿಯಾಗಲಾರದು. ತತ್ಕಾರಣ ವೈಲಕ್ಷಣ್ಯ ದೃಷ್ಟಿಯಿಂದ ಕೀಳು ಮೇಲು ಭಾವನೆ ಸಮಾಜದಲ್ಲಿ ಮೆರೆಯಲು ಅವಕಾಶ ನೀಡುವುದು ಅತ್ಯಂತ ಹಾನಿಕರ.

ಎರಡನೆಯದು ಆ ದೃಷ್ಟಿಯಿಂದ ಕೈಗೊಂಡಿರುವ ಕಾರ್ಯವನ್ನು ತ್ಯಾಗಮಾಡುವುದು ಸುತರಾಂ ನಿಷಿದ್ಧ. ಇದಕ್ಕೆ ಮುಂದುವರಿಯಬೇಕೆಂಬ ಬಯಕೆ ಪಂಡಿತ ಪಾಮರರಾದಿಯಾಗಿ ಸರ್ವರಿಗೂ ಸಮಾನ. ಆದ್ದರಿಂದ ಯತ್ನದಲ್ಲಿ ಆಲಸ್ಯಕೂಡದು ಎಂಬುದೊಂದೇ ಅಂಗೀಕಾರ ಯೋಗ್ಯವಾದ ಸಾಮಾಜಿಕ ದೃಷ್ಟಿ. ಶ್ರೀಕೃಷ್ಣನು ಹೇಳಿದಂತೆ "ಕರ್ಮಣ್ಯೇವಾಧಿಕಾರಸ್ತೇ ಮಾಫಲೇಷು ಕದಾಚನ" -- ದುಡಿಯುವುದು ಸಹಜ, ಸಾರ್ವತ್ರಿಕ. ಫಲಪ್ರಾಪ್ತಿ ಸ್ವಪ್ರಯತ್ನದಿಂದ ಯಾರಿಗೂ ಸಾಧ್ಯವಿಲ್ಲ. ಆದ್ದರಿಂದ ಫಲ ಬೇಕಾದರೆ ದುಡಿಯಬೇಕು. ದುಡಿಯದಿದ್ದರೆ ಜನ್ಮವಿಫಲ ಎಂಬ ಇಬ್ಬಗೆ ಭಾವನೆ ಉಂಟಾದರೂ, ಅದು ಸರಿಯಲ್ಲದಿದ್ದರೂ ಯತ್ನ ಬಿಡಬಾರದು. ಪ್ರಕೃತ ಪರಮಾತ್ಮನ ಇರವು ಮತ್ತು ಸ್ವಭಾವಗಳು ವಾಚಾಮಗೋಚರವಾದುದರಿಂದ ತಾಟಸ್ಥ್ಯ ವಹಿಸುವುದು ತಪ್ಪು. ಯಥಾಶಕ್ತಿ ಅದರ ಪರಿಚಯ ಮಾಡಿಕೊಂಡೇ ತೀರಬೇಕು. ಅಲ್ಲವಾದರೆ ಉಳಿಗಾಲವಿಲ್ಲ. ಈ ದೃಷ್ಟಿಯಿಂದ ಪಂಡಿತಪಾಮರರಿಗೆ ಏನೂ ವ್ಯತ್ಯಾಸವಿಲ್ಲ. ಭಗವಂತನ ಪರಿಚಯ ಮಾಡಿಕೊಳ್ಳಲು ಯತ್ನಿಸಿ ಮಂಕನೂ ಸಹ ತತ್ವದ ಸ್ವರೂಪ ಸ್ವಭಾವಗಳನ್ನರಿಯಲು ಯತ್ನಿಸಿ ವಿಫಲನಾದರೆ ಆಶ್ಚರ್ಯವೇನಿಲ್ಲ. ದರ್ಶನದ ವಿಷಯದಲ್ಲಿ ಪ್ರಯತ್ನ ಭೇದವಿದ್ದರೂ, ಫಲಪ್ರಾಪ್ತಿಯಾಗದಿದ್ದರೂ ಉತ್ಕರ್ಷ ನಿಕರ್ಷಭಾವವನ್ನು ತೊಡೆದುಹಾಕುತ್ತದೆ. ಉದಾ: ಮಂದರ ಪರ್ವತದಂತೆ ಅತಿ ಹಿರಿಯದಾದ ಕಲ್ಲು ಬಂಡೆಯನ್ನು ನೀರಿನೊಳಗೆ ಹಾಕಿದರೆ ತೇಲಲಾರದು. ಅಂತೆಯೇ ಸಣ್ಣದಾದ ಒಂದು ಕಲ್ಲು ಚೂರನ್ನು ನೀರಿಗೆ ಎಸೆದರೆ ಅದೂ ಸಹ ತೇಲಲಾರದು. ಇವೆರಡಕ್ಕೂ ಪರಿಣಾಮ ಒಂದೇ. ಇದನ್ನು ಅಣು ಕುಲಾಚಲ ಭೇದದಿಂದ ಅಭೇದದ ಪ್ರಭಾವವನ್ನು ತೋರಿಸಿಕೊಡಲು ನೀರಿಗೆ ಹಾಕಿದರೆ ವಿಪುಲತೆಯ ಆಧಾರದ ಮೇಲೆ ಕುಲಾಚಲವು ನೀರಿನಮೇಲೆ ನಿಲ್ಲಲು ಸಮರ್ಥವಾಗುವುದಿಲ್ಲ. ಅಂತೆಯೇ ಒಂದು ಸಣ್ಣ ಕಲ್ಲೂ ಸಹ ಚಿಕ್ಕದಾದರೂ ನೀರಿನಮೇಲೆ ತೇಲುವಂತಿಲ್ಲ. ಈ ದೃಷ್ಟಿಯಿಂದ ದೆಟ್ಟಕ್ಕೂ ಪುಟ್ಟಕಲ್ಲಿಗೂ ಗಾತ್ರ ಭೇದವಿದೆಯೇ ವಿನಾ ಆ ಗಾತ್ರದ ಪ್ರಭಾವ ನೀರಿನಲ್ಲಿ ಸೇರಿದಂತೆ ತೋರುವುದಿಲ್ಲ. ಆದ್ದರಿಂದ ನೀರಿನಮೇಲೆ ತೇಲಲಾರದ ದೆಟ್ಟಕ್ಕೂ ಪುಟ್ಟ ಕಲ್ಲಿಗೂ ಈ ದೃಷ್ಟಿಯಿಂದ ಏನೂ ವ್ಯತ್ಯಾಸವಿಲ್ಲ. ಎರಡೂ ನೀರಿನಲ್ಲಿ ಮುಳುಗಿಯೇ ತೀರಬೇಕು. ಅಂತೆಯೇ ಅಪಾರವಾದ ವೇದವು ಭಗವಂತನನ್ನು ಪೂರ್ಣವಾಗಿ ಪ್ರದರ್ಶಿಸಲು ಸಮರ್ಥವಾಗದೆ ಹಿಮ್ಮೆಟ್ಟಿತು. ಅಂತೆಯೇ ಅಲ್ಪಜ್ಞನಾದ ಚೇತನನು ಉದ್ಯಮದಲ್ಲಿ ತೊಡಗಿ ಕೈಲಾಗದೆ ಕುಸಿದು ಬಿಟ್ಟನು. ಈ ದೃಷ್ಟಿಯಿಂದ ಜ್ಞಾನರಾಶಿಯಾದ ವೇದಕ್ಕೂ ಅಣು ಮಾತ್ರ ಜ್ಞಾನವುಳ್ಳ ಚೇತನನಿಗೂ ವ್ಯತ್ಯಾಸವಿಲ್ಲ. ಜಾತಸ್ಯ ಮರಣಂ ಧ್ರುವಂ ಎಂಬ ನೀತಿಯ ಪ್ರಕಾರ ಬಡವನೂ ಬಲ್ಲಿದನೂ ಸಾಯಬೇಕಾದ್ದರಿಂದ, ಸಿರಿತನ, ಬಡತನಕ್ಕೆ ವ್ಯತ್ಯಾಸವೇ ಇಲ್ಲ. ಸಿರಿವಂತನು ಬಿಟ್ಟುಹೋಗುತ್ತಾನೆ. ಬಡವನು ಪಡೆಯದೆ ಹೋಗುತ್ತಾನೆ. ಆ ಕಾರಣ ಲೋಕದಲ್ಲಿ ಬೆಳೆಸುವ ವೈಷಮ್ಯ ಅತಿನೀಚ. ಆದರೆ ಬುದ್ಧಿಯನ್ನು ಬೆಳೆಸದಿರುವುದು ಒಂದು ಬಗೆಯ ಆಲಸ್ಯ. ಕರ್ತವ್ಯಪಾಲನೆ ಮಾಡಬೇಕೇವಿನಾ ಫಲದೃಷ್ಟಿ ಸಿದ್ಧವಾಗಬೇಕು ಎಂಬ ಕಾಮನೆ ದೃಷ್ಟಿಯಿಂದ ಕೆಲಸ ಕೈಗೊಳ್ಳುವುದು ವಿನಾಶಕರ. ಆದ್ದರಿಂದ ದೊಡ್ಡವರು ಮಾತ್ರ ಸಂನ್ಯಾಸಿಗಳಾಗಿ ಭಗವಂತನ ಸೇವೆಯಲ್ಲೇ ಇದ್ದುಕೊಂಡಿರುವ ಶ್ರೇಷ್ಠರು ಎಂಬುದು ತಪ್ಪು. ಅವರು ನಮಗಿಂತ ಮಿಗಿಲೇ ವಿನಾ ಫಲಪ್ರಾಪ್ತಿ ಇಲ್ಲದ್ದರಿಂದ ಅವರ ಯತ್ನ ವಿಫಲವಾಯಿತು. ಆ ದೃಷ್ಟಿಯಿಂದ ಯತ್ನವನ್ನೇ ಕೈಬಿಡುವುದು ತಪ್ಪು. ಸಿದ್ಧಿರ್ಭವತಿ ನೇತಿ ಸಂಶಯಃ ಎಂಬ ದೃಷ್ಟಿಯಿಂದ ಯತ್ನ ಕೈಬಿಡುವುದು ಅನುಚಿತ. ಆದ್ದರಿಂದ ಬ್ರಹ್ಮಜ್ಞನಾದ ಚತುರ್ಮುಖನೇ ಮುಂತಾದವರೂ, ಶಬ್ದರಾಶಿಯಾದ ವೇದವೂ ಸಂತತ ಪ್ರಯತ್ನ ನಡೆಸುತ್ತಿದ್ದರೂ, ಫಲಸಿದ್ಧಿ ತೋರದಿದ್ದರೂ ಯತ್ನ ಬಿಟ್ಟಿಲ್ಲ. ಈ ಭಾವನೆಯನ್ನು ಮನಸ್ಸಿನಲ್ಲಿಟ್ಟುಕೊಂಡು ಅಂತೆಯೇ ತಾನೂ ಸಹ ಚೇತನನಾಗಿರುವುದರಿಂದ ತತ್ವಜ್ಞಾನದಲ್ಲಿ ತೊಡಗುವುದು ಅನುಚಿತವಲ್ಲ ಎಂದು ಈ ಶ್ಲೋಕದಲ್ಲಿ ಆಚಾರ್ಯರು ನಿರೂಪಿಸಿದ್ದಾರೆ. (ಸಶೇಷ)

# ತಿರುಮಲೆಯ ಯಾತ್ರಿಕರಿಗೆ ವಿಶೇಷ ಸೌಲಭ್ಯಗಳು

* ಎಲ್ಲ ವರ್ಗಗಳವರಿಗೂ ಉಚಿತವಾಗಿ ದೊರೆಯುವ ಪರಿಶುದ್ಧ ಸತ್ರಗಳು ಅಥವಾ ಸುಲಭ ದರದಲ್ಲಿ ದೊರೆಯುವ ಬೀಡುಗಳ ವಸತಿ ಸೌಕರ್ಯ.

* ವೆಂಕಟೇಶ್ವರಸ್ವಾಮಿ ದರ್ಶನದ ಯಾತ್ರಿಕರ ಕಾಯುವ ಕೋಣೆಗಳಲ್ಲಿ (ವೈಕುಂಠ) ಗಾಳಿ ಬೆಳಕುಗಳ ವ್ಯಾಪಕ ಏರ್ಪಾಡು.

* ಸರತಿಯ ಸಾಲಿನ ಕೋಣೆಗಳಲ್ಲಿ ಅಲ್ಪಾಹಾರ ಸೌಲಭ್ಯ

* ಸುಲಭದರದ ಆಹಾರದ ಪೊಟ್ಟಣಗಳ ಮಾರಾಟ.

* ಸರತಿಯ ಸಾಲಿನ ಕೋಣೆಗಳಿಂದ ಹೊರಹೋಗಬೇಕಾದ ಅಗತ್ಯವಿಲ್ಲದಂತೆ ಶೌಚ ಗೃಹಗಳು.

* ಆಂಧ್ರಪ್ರದೇಶ್ ಹಯನೋತ್ಪಾದನಾವಿತರಣೆ ಇಲಾಖೆಯವರಿಂದ ಶುದ್ಧ ಹಾಲಿನ ಮಾರಾಟ.

* ಯಾತ್ರಿಕರ ವಾಚನಾಭಿರುಚಿಯನ್ನು ಹೆಚ್ಚಿಸುವ ತಿ.ತಿ.ದೇ. ಪ್ರಕಟಣೆಗಳಾದ ಪುಸ್ತಕಗಳು, ದೈವಚಿತ್ರಗಳ ಮಾರಾಟ.

* ಸರತಿಯ ಸಾಲಿನ ಯಾತ್ರಿಕರಿಗೆ ಉಲ್ಲಾಸಕರವಾದ ಟೆಲಿವಿಷನ್‌ಪ್ರದರ್ಶನ, ಭಕ್ತಿ ಸಂಗೀತ.

* ಸರತಿಯ ಸಾಲು ಹಾಗೂ ತಿರುಮಲೆಯ ಕಾಲುಹಾದಿಯ ೭-ನೇ ಮೈಲಿಯ ಬಳಿ ವೈದ್ಯಸೌಲಭ್ಯ ಉಪಹಾರ ಸೌಲಭ್ಯ ಕ್ಯಾಂಟೀನ್.

* ಯಾತ್ರಿಕರ ವಸ್ತುಗಳು, ಪಾದರಕ್ಷೆಗಳ ರಕ್ಷಣೆಗಾಗಿ ಪ್ರತ್ಯೇಕ ಸೌಲಭ್ಯ.

* ತಿರುಮಲೆಯ ಸ್ವಾಗತ ಕಚೇರಿಯಿಂದ ವಿವಿಧ ಸ್ಥಳಗಳಿಗೆ ಆಟೋ ಸೌಕರ್ಯ ಹಾಗೂ ಉಚಿತ ಬಸ್ ಸೌಕರ್ಯ.

* ತಿರುಮಲೆಗೆ ನಡೆದು ಹೋಗುವವರ ವಸ್ತುಗಳನ್ನು ಸುರಕ್ಷಿತವಾಗಿ ತಿರುಮಲೆಗೆ ಸೇರಿಸುವ ಅನುಕೂಲ.

* ಯಾತ್ರಿಕರನ್ನು ಪಂಡಾಗಳು, ವಂಚಕರಿಂದ ತಪ್ಪಿಸಲು ಪೇಷ್ಕಾರ್ ಪದವಿಯ ಅಧಿಕಾರಿಯನ್ನು ಮಹಾದ್ವಾರದಲ್ಲಿ ನೇಮಿಸುವಿಕೆ.

* ಸರತಿಯ ಸಾಲಿನ ಕೋಣೆಗಳ ಯಾತ್ರಿಕರ ದೂರುಗಳ ವಿಚಾರಣೆಗಾಗಿ, ಅನುಕೂಲಗಳ ಏರ್ಪಾಡಿಗಾಗಿ ಪೇಷ್ಕಾರ್ ಪದವಿಯ ಮತ್ತೊಂದು ಅಧಿಕಾರಿ ಮತ್ತು ಸಿಬ್ಬಂದಿ.

**ದೇವಸ್ಥಾನದ ಪ್ರಯತ್ನಗಳಲ್ಲಿ ಇವು ಕೆಲವು ಮಾತ್ರವೇ.**

ಗಮನಿಕೆ: ತಿರುಮಲೆಯಲ್ಲಿ ಅಂಚೆ ಕಚೇರಿಯು ರಾತ್ರಿ ೮--೩೦ ಗಂಟೆಯವರೆಗೆ ಕೆಲಸಮಾಡುತ್ತದೆ. ಜೊತೆಗೆ ಪ್ರಧಾನ ಅಂಚೆ ಕಚೇರಿಯು ರಾತ್ರಿ ೧೦-೩೦ ರಿಂದ ೧--೦೦ ಗಂಟೆಯವರೆಗೆ ಕೆಲಸಮಾಡುತ್ತದೆ.

# ವ್ಯಾಸರಾಯರು

- ಕೊರಟಿ ಶ್ರೀನಿವಾಸರಾವ್

ವ್ಯಾಸರಾಯರ ಆರಾಧನೆಯ ಮಾರ್ಚ್ ತಿಂಗಳಿನಲ್ಲಿ. ಕನ್ನಡದ ಖ್ಯಾತ ಐತಿಹಾಸಿಕ ಕಥೆಗಾರರಾದ ದಿವಂಗತ ಕೊರಟಿ ಶ್ರೀನಿವಾಸರಾಯರು, ತಿ.ತಿ. ದೇವಸ್ಥಾನಗಳ ದಾಸಸಾಹಿತ್ಯ ಪ್ರಕಟನೆಯಾದ ಶ್ರೀನಿವಾಸನ ಹಾಡುಗಳು ಭಾಗ -- 2 -- ಪುಸ್ತಕಕ್ಕಾಗಿ ಬರೆದ ವ್ಯಾಸರಾಯರ ಜೀವನವಾಹಿನಿಯನ್ನಿಲ್ಲಿ ಪ್ರಸ್ತುತಪಡಿಸಲಾಗಿದೆ. ---ಸಂ||

ಹದಿನೈದನೆ ಶತಮಾನದಲ್ಲಿ ತಲಕಾಡು ಮಂಡಲಕ್ಕೆ ಸೇರಿದ ಬನ್ನೂರು ಎಂಬ ಪಾಳೆಯ ಪಟ್ಟನ್ನು ವೆಂಕಟಗಿರಿನಾಯಕನೆಂಬ ದೊರೆಯು ಆಳುತ್ತಿದ್ದನು. ಇವನು ಧರ್ಮಿಷ್ಠನೂ, ಉದಾರಿಯೂ, ವಿದ್ವಾಪಕ್ಷಪಾತಿಯೂ ಆಗಿದ್ದನು. ಈತನಿಗೆ ರಾಮದೇವನೆಂಬ ಮಂತ್ರಿ ಇದ್ದನು. ಇವನು ದೊರೆಯ ಪುರೋಹಿತನೂ, ಹಿತೈಷಿಯೂ ಆಗಿದ್ದನು. ಅವನ ದಕ್ಷ ಆಡಳಿತದಲ್ಲಿ ಪ್ರಜೆಗಳು ಸುಖ ಶಾಂತಿಗಳಿಂದ ಬಾಳುತ್ತಿದ್ದರು. ರಾಮದೇವನು ಲೌಕಿಕದಲ್ಲಿದ್ದರೂ ವೇದಾಧ್ಯಯನಸಂಪನ್ನನಾದ ಬ್ರಾಹ್ಮಣನಾಗಿದ್ದನು. ಅವನ ಹಿರಿಯರು ಚತುಶ್ಶಾಸ್ತ್ರಗಳನ್ನು ಬಲ್ಲರಾಗಿದ್ದರು. ಅವರು ಆರುವೇಲು ಪಂಗಡಕ್ಕೆ ಸೇರಿದವರೆಂದು ಕೆಲವು ವಿದ್ವಾಂಸರ ಅಭಿಪ್ರಾಯ.

ಮತ್ತೆ ಕೆಲವು ವಿದ್ವಾಂಸರು ರಾಮದೇವನ ಹಿರಿಯರು, ಪಾಷ್ಟಿಕ ಅಂದರೆ ಅರವತ್ತು ಒಕ್ಕಲು ಪಂಗಡಕ್ಕೆ ಸೇರಿದವರೆಂದೂ, ಇದಕ್ಕೆ "ಬ್ರಹ್ಮಣ್ಯತೀರ್ಥ ವಿಜಯಸಾರ ಸಂಗ್ರಹ"ದಲ್ಲಿ ಬಂದಿರುವ ಶ್ಲೋಕವು ಪ್ರಮಾಣವನ್ನು ಒದಗಿಸುವುದೆಂದೂ ನಂಬುತ್ತಾರೆ. "ಬ್ರಹ್ಮಣ್ಯತೀರ್ಥ ವಿಜಯಸಾರ ಸಂಗ್ರಹದಲ್ಲಿ" ಬಂದಿರುವ ಶ್ಲೋಕ ಹೀಗಿದೆ.

ಜಾತೋ ಭಾಸ್ಕರ ಏವ
ಪೂಗವನಜಾದ್ರಾಮಾನ್ನಸಿಂಹಾಖ್ಯಯಾ
ಸೋऽಪಿ ಶ್ರೀಪುರುಷೋತ್ತಮಾದ್ಯತಿರಭೂ
ದ್ಬ್ರಹ್ಮಣ್ಯತೀರ್ಥಾಭಿದಃ
ಕರ್ನಾಟಂ ಸ ಸುವ್ಯಕ್ತಿಭಿರ್ಮ್ಯತ
ಮಥೋಜ್ಞೀವ್ಯದ್ವಿಜಂ ಪಾಷ್ಟಿಕಮ್
ಕೃತ್ವಾವ್ಯಾಸಮುನಿಂ ತತೋಽಸ್ಯ
ಸುತಕಂ ಲೇಭೇ ವನೇ ವಿಠಲಮ್

ಕಲ್ಯಾಣಿಯನ್ನಾಳಿದ ಶಕಪುರುಷ ವಿಕ್ರಮಾದಿತ್ಯನು ಅಗ್ನಿಷ್ಟೋಮ, ವಾಜಪೇಯ, ಅಶ್ವಮೇಧ ಯಾಗಗಳನ್ನು ಮಾಡಬಯಸಿ, ಅದಕ್ಕಾಗಿ ಆಂಧ್ರ ಪ್ರದೇಶದ ವೆಂಗಿಮಂಡಲದಿಂದ ಶಾಸ್ತ್ರಪಾರಂಗತರಾದ ಬ್ರಾಹ್ಮಣರನ್ನು ರಾಜಧಾನಿಗೆ ಕರೆಸಿಕೊಂಡು, ಅವರಿಗೆ ಅಗ್ರಹಾರಗಳನ್ನು ನಿರ್ಮಿಸಿ, ವೃತ್ತಿಗಳನ್ನು ಕಲ್ಪಿಸಿ, ದತ್ತಿಗಳನ್ನು ಹಾಕಿಕೊಟ್ಟನು. ಅವರ ಸುಖ ವಸತಿ -- ನೆಮ್ಮದಿಯ ಜೀವನಕ್ಕೆ ಕಾರಣನಾಗಿದ್ದನು. ಹೀಗೆ ವೆಂಗಿಮಂಡಲದಿಂದ ಬಂದ ಬ್ರಾಹ್ಮಣರ ಸಂಖ್ಯೆ ಆರುಸಾವಿರವಾಗಿದ್ದುದರಿಂದ ಅವರನ್ನು "ಆರುವೇಲು" ಎಂಬ ವಿಶೇಷ ಗೌರವದಿಂದ ಕರೆಯುತ್ತಿದ್ದರು. ಅವರು ಚಾಲುಕ್ಯ ಸಾಮ್ರಾಜ್ಯದಲ್ಲಿ ನೆಲೆಸಿದ ಮೇಲೆ ತೆಲುಗನ್ನು ಮರೆತು ಕನ್ನಡಿಗರಾದರು. ಈ ವಂಶಕ್ಕೆ ರಾಮದೇವನ ಹಿರಿಯರು ಸೇರಿದ್ದರೆಂದು ನಂಬುತ್ತಾರೆ.

ರಾಮದೇವನು ತನ್ನ ವಿದ್ಯೆ ಪ್ರಮಾಣಿಕತೆ, ದಕ್ಷತೆಗಳಿಂದ ಪಾಳೆಯಗಾರನ ಅಭಿಮಾನ ಗೌರವಗಳಿಗೆ ಪಾತ್ರನಾಗಿದ್ದನು. ಎಲ್ಲರೂ ರಾಮದೇವನ ವಿದ್ಯೆಯನ್ನು ನೋಡಿ ಅವನನ್ನು ಸುಮತಿ, ಆಚಾರ್ಯರೆಂದು ಕರೆಯುತ್ತಿದ್ದರು.

ಇವನಿಗೆ ತಕ್ಕ ಪತ್ನಿ ಸೀತಮ್ಮ ವಿವಾಹವಾಗಿ ಪತಿಗೃಹ ಸೇರಿದ ಮೇಲೆ ಲಕ್ಷ್ಮಮ್ಮನೆಂಬ ಅಭಿಮಾನದ ಹೆಸರಿಗೆ ಪಾತ್ರಳಾಗಿದ್ದಳು. ಈಕೆ ತುಂಬಿದ ಮನೆಯ ಹೆಣ್ಣುಮಗಳಾದ್ದರಿಂದ ಆಶ್ರಿತವತ್ಸಲೆಯೂ ದೀನವಲಿತರ ಬಗೆಗೆ ದಯಾರ್ದ್ರ ಹೃದಯ ಉಳ್ಳವಳೂ ಆಗಿದ್ದಳು. ಬಹುಕಾಲವಾಗಿದ್ದರೂ ಈ ದಂಪತಿಗಳಿಗೆ ಮಕ್ಕಳಾಗಿರಲಿಲ್ಲ. ಇದೇ ಅವರ ಜೀವನದ ಕೊರಗಾಗಿ ಕಾಡುತ್ತಿತ್ತು. ಅವರು ಮಾಡಿದ ಗುರುಹಿರಿಯರ ಸೇವೆಯ ಫಲವಾಗಿ ಒಂದು ಹೆಣ್ಣುಮಗು ಹುಟ್ಟಿತು. ಇವಳಿಗೆ ಭೀಮಕ್ಕನೆಂದು ಹೆಸರಿಟ್ಟರು. ಆದರೆ ಅವರು ಕುಲದೀಪಕನಾಗಬಲ್ಲ ಪುತ್ರನಿಗಾಗಿ ಹಂಬಲಿಸುತ್ತಿದ್ದರು. ಪುನ್ನಾಮ ನರಕದಿಂದ ತಮ್ಮನ್ನು ದಾಟಿಸಬಲ್ಲ ಪುತ್ರನಿಗಾಗಿ ಅವರು ಅನೇಕ ವ್ರತ, ದಾನ, ಧರ್ಮಗಳನ್ನು ಮಾಡಿದರು. ಭಗವದನುಗ್ರಹದಿಂದ ಶುಭಸೂಚನೆಯೂ ಆಯಿತು. ಬದರಿ ಯಾತ್ರೆಯನ್ನು ಕೈಗೊಳ್ಳಲು ಸಂಕಲ್ಪಿಸಿದರು. ಇನ್ನೇನು ಯಾತ್ರೆಗೆ ಹೊರಡಬೇಕೆನ್ನುವ ಸಮಯದಲ್ಲಿ ರಾಮದೇವನಿಗೆ ಆರೋಗ್ಯ ಹದಗೆಟ್ಟು ಇದ್ದಕ್ಕಿದ್ದರೆತೆ ಹಾಸಿಗೆ ಹಿಡಿದು ಮಲಗಿದನು. ಕಡೆಗೊಂದು ದಿನ ವಿಪರೀತ ಜ್ವರದ ಬಾಧೆಯಿಂದ ರಾಮದೇವನ ಮೈತಣ್ಣಗಾಯಿತು. ಎಲ್ಲರು ಅವನು ಮಡಿದನೆಂದು ನಿಶ್ಚೈಸಿ ಗೋಳಿಟ್ಟರು.

ಇದೇ ಸಮಯದಲ್ಲಿ ಅಬ್ಬೂರಿನಲ್ಲಿ ವಾಸಿಸುತ್ತಿದ್ದ ಪೂರ್ವಾದಿ ಮಠದ ಪರಂಪರೆಯಲ್ಲಿ ಬಂದಿದ್ದ ಪುರುಷೋತ್ತಮ ತೀರ್ಥರ ಶಿಷ್ಯರಾದ ಬ್ರಹ್ಮಣ್ಯತೀರ್ಥರೆಂಬ ಮಹಾ ತಪಸ್ವಿಗಳು ಬಂದು, ಬನ್ನೂರಿನ ಬಳಿಯ ಕಾವೇರಿಯ ತೀರದಲ್ಲಿ ಬೀಡುಬಿಟ್ಟಿದ್ದರು.

ಬ್ರಹ್ಮಣ್ಯತೀರ್ಥರು ಮಹಾ ತಪಸ್ವಿಗಳೂ, ವೈರಾಗ್ಯಮೂರ್ತಿಗಳೂ, ವಿದ್ವಾಂಸರೂ, ಆಗಿದ್ದ ಮಹಾನುಭಾವರು. ಇವರ ಪೂರ್ವಾಶ್ರಮದ ಹೆಸರು ನರಸಿಂಹಾಚಾರ್ಯರೆಂದು.

ಚೋಳದೇಶವನ್ನು ಪವಿತ್ರಗೊಳಿಸುವ ಮರುದ್ವೃಧಾ ನದೀತೀರದಲ್ಲಿದ್ದ ಶ್ರೀ ನೃಸಿಂಹ ಕ್ಷೇತ್ರದಲ್ಲಿ ಇವರ ಜನನವಾಗಿತ್ತು. ನಿಷ್ಠಾವಂತರೂ, ಭಗವದ್ಭಕ್ತರೂ ಆದ ರಾಮಾಚಾರ್ಯರು ಇವರ ತಂದೆ. ನರಸಿಂಹಸ್ವಾಮಿಯ ಕೃಪೆಯಿಂದ ಹುಟ್ಟಿದ ಇವರು ಅಬ್ಬೂರಿನಲ್ಲಿದ್ದ ಪುರುಷೋತ್ತಮತೀರ್ಥರಲ್ಲಿ ಸಚ್ಛಾಸ್ತ್ರವನ್ನು ಅಭ್ಯಾಸಮಾಡಿ, ಗುರುಗಳ ಪೂರ್ಣಾನುಗ್ರಹಕ್ಕೆ ಪಾತ್ರರಾಗಿ ಯತ್ಯಾಶ್ರಮವನ್ನು ಸ್ವೀಕರಿಸಿ ಬ್ರಹ್ಮಣ್ಯತೀರ್ಥರೆಂಬ ಹೆಸರನ್ನು ಪಡೆದಿದ್ದರು.

ಇವರ ಗುರುಗಳಾದ ಪುರುಷೋತ್ತಮತೀರ್ಥರು ಕ್ರಿ.ಶ. ೧೪೬೦ ರಲ್ಲಿ ಬ್ರಹ್ಮಣ್ಯತೀರ್ಥರಿಗೆ ಸಂಸ್ಥಾನಾದಿಪತ್ಯ ನೀಡಿ ಸಮೀಪದ ಗುಡ್ಡದ ಒಂದು ಗುಹೆಯಲ್ಲಿ ಅದೃಶ್ಯರಾದರು. ತದನಂತರ ಬ್ರಹ್ಮಣ್ಯತೀರ್ಥರು ದೇಶ ಸಂಚಾರ ಮಾಡುತ್ತಾ ಬದರಿಗೆ ಹೋಗಿದ್ದರು. ಅಲ್ಲಿ ಬದರೀನಾರಾಯಣನನ್ನು ಸಂದರ್ಶಿಸಿ ತಮ್ಮನಂತರ ಪೀಠಕ್ಕೆ ಬರಲು ಒಬ್ಬ ಪ್ರತಿಭಾವಂತ ವ್ಯಕ್ತಿಯನ್ನು ಅನುಗ್ರಹಿಸಲು ಕೇಳಿದ್ದರು. ಬದರೀನಾಥನ ಅನುಗ್ರಹವೂ ಆಗಿತ್ತು.

ಬದರೀ ಯಾತ್ರೆಯಿಂದ ಹಿಂತಿರುಗಿದ ಬ್ರಹ್ಮಣ್ಯತೀರ್ಥರು ದೈವಯೋಗದಿಂದ ರಾಮದೇವನು ಅಪಮೃತ್ಯುವಿಗೆ ತುತ್ತಾದ ದಿನದಂದು ಬನ್ನೂರಿನ ಕಾವೇರಿ ತೀರದಲ್ಲಿ ಶಿಷ್ಯರೊಡನೆ ತಂಗಿದ್ದರು.

ಸಹಗಮನಕ್ಕೆ ಸಿದ್ಧಳಾದ ಲಕ್ಷ್ಮಮ್ಮನು ಹಿರಿಯರ ಆದೇಶದಂತೆ ಅರಿಶಿನ ಕುಂಕುಮಗಳಿಂದ ಅಲಂಕೃತಳಾಗಿ ಬಂದು ಬ್ರಹ್ಮಣ್ಯತೀರ್ಥರ ಪಾದಕ್ಕೆ ವಂದಿಸಿದಳು.

ಕಾಲಿಗೆ ನಮಸ್ಕರಿಸಿದ ಆ ಸಾಧ್ವಿಯನ್ನು ಯತಿಗಳು ಭಗವತ್ಪ್ರೇರಣೆಯಂತೆ "ದೀರ್ಘ ಸುಮಂಗಲೀ ಭವ" ಎಂದು ಆಶೀರ್ವದಿಸಿದರು.

ಲಕ್ಷ್ಮಮ್ಮನಿಗೆ ಆಶ್ಚರ್ಯವೂ ಸಂತೋಷವೂ ಏಕಕಾಲದಲ್ಲಿ ಆಯಿತು.

"ಸ್ವಾಮಿ ನನ್ನ ಪತಿಯನ್ನು ಈ ಜನ್ಮದಲ್ಲಿ ಈ ಪಾಪಿ ಕಣ್ಣುಗಳಿಂದ ಪುನಃ ಜೀವಂತ ನೋಡುವೆನೇ? ಆ ಭಾಗ್ಯ ಈ ನಿರ್ಭಾಗ್ಯಳಿಗೆ ಇದೆಯಾ?" ಎಂದೂ ಅವಳು ಕೇಳಿದಳು.

"ಖಂಡಿತವಾಗಿ ನೀನು ಪಾಪಿಯಲ್ಲ ಮಗಳೆ. ನೀನು ದೀರ್ಘಸುಮಂಗಲಿಯಾಗಿ ಬದುಕುವುದು ಮಾತ್ರವಲ್ಲ ಸುಪುತ್ರನ ತಾಯಿಯೂ ಆಗುವೆ", ಎಂದು ಹರಸಿದರು.

ಬ್ರಹ್ಮಣ್ಯತೀರ್ಥರು ಲಕ್ಷ್ಮಮ್ಮನೊಡನೆ ಬನ್ನೂರನ್ನು ಪ್ರವೇಶಿಸಿ, ರಾಮದೇವನನ್ನು ಶಂಖೋದಕದಿಂದ ಪ್ರೋಕ್ಷಿಸಿದಾಗ, ಮೃತನಾಗಿದ್ದ ಅವನು ಚೇತರಿಸಿಕೊಂಡು ಕಣ್ಣುತೆರೆದು ಹಾಸಿಗೆಯಿಂದ ಎದ್ದುಕುಳಿತನು. ತನಗೆ ಪುನರ್ಜನ್ಮ ಕೊಟ್ಟ ಬ್ರಹ್ಮಣ್ಯತೀರ್ಥರನ್ನು ಅನೇಕ ರೀತಿಯಲ್ಲಿ ಸೇವಿಸಿದನು.

ಆತನ ಸೇವೆಯಿಂದ ಸುಪ್ರೀತರಾದ ಬ್ರಹ್ಮಣ್ಯತೀರ್ಥರು "ರಾಮದೇವ, ಶ್ರೀಮೂಲಗೋಪಾಲಕೃಷ್ಣನೇ ನಮ್ಮ ಬಾಯಿಯಲ್ಲಿ ನಿಮಗೊಬ್ಬ ಪುತ್ರ ಜನಿಸುವನೆಂದು ನುಡಿಸಿದ್ದಾನೆ. ಆ ಪ್ರಥಮ ಗಂಡು ಮಗ ನಮಗೆ ಸಲ್ಲಬೇಕು. ಅನಂತರ ನಿಮಗೆ ಮತ್ತೊಬ್ಬ ಮಗನು ಹುಟ್ಟುವನು. ಆದರೆ ಒಂದು ಮಾತು, ನಿಮಗೆ ಹುಟ್ಟುವ ಮೊದಲನೆಯ ಗಂಡು ಮಗುವನ್ನು ಭೂಸ್ಪರ್ಶವಾಗುವುದಕ್ಕಿಂತ ಮೊದಲೇ ನಮಗೆ ಒಪ್ಪಿಸಬೇಕು!", ಎಂದು ಹೇಳಿ ಅವರನ್ನು ಆಶೀರ್ವದಿಸಿ ಬೀಳ್ಕೊಂಡರು.

ಅದರಂತೆ ಲಕ್ಷ್ಮಮ್ಮನು ಗರ್ಭವತಿಯಾದಳು. ಈ ವಾರ್ತೆಯು ಬ್ರಹ್ಮಣ್ಯತೀರ್ಥರಿಗೆ ಶಿಷ್ಯರಿಂದ ತಿಳಿಯಿತು. ಅವರು ಗರ್ಭಸ್ಥ ಶಿಶು ಭೂಪತನವಾಗುವುದನ್ನೇ ಎದುರು ನೋಡುತ್ತಾ ಬನ್ನೂರಿನಲ್ಲಿ ನಿಂತರು.

ಬ್ರಹ್ಮಣ್ಯತೀರ್ಥರು ಲಕ್ಷ್ಮಮ್ಮನ ಗರ್ಭಸ್ಥ ಶಿಶುವಿಗೆ ಜ್ಞಾನೋಪದೇಶ ಮಾಡುವವರೋ ಎಂಬಂತೆ, ಪ್ರತಿನಿತ್ಯ ಶ್ರೀಹರಿಗೆ ಅಭಿಷೇಕಿಸಿದ ಹಾಲನ್ನು ಲಕ್ಷ್ಮಮ್ಮನಿಗೆ ಕುಡಿಯಲು ಕಳುಹಿಸುತ್ತಿದ್ದರು. ಈ ವಿಷಯವನ್ನು ಜ್ಞಾನಿವರೇಣ್ಯರಾದ ಶ್ರೀಗುರು ಜಗನ್ನಾಥದಾಸರು (ಕೋಶಿಗಿ ಆಚಾರ್ಯರು) ತಮ್ಮ ವ್ಯಾಸರಾಯರ ಚರಿತ್ರೆಯಲ್ಲಿ ಹೀಗೆ ಬಣ್ಣಿಸಿರುವರು.

ಬಾಲೆ ಬಸಿರೊಳಗಿಪ್ಪ ಶಿಶು ಗೋ--
ಪಾಲ ಪದಯುಗ ಭಕ್ತನವನಿಗೆ
ಹಾಲಕಾಗಿಹ ಹರಿಯ ಮಜ್ಜನ ಮಾಡಿ ನಿತ್ಯದಲಿ
ಪಾಲಿನಿಂದಲೆ ಗರ್ಭದಲೆ ತಾ
ಬಾಲಗೀಪರಿ ಜ್ಞಾನವಿತ್ತು
ಪಾಲಿಸೀ ಬ್ರಹ್ಮಣ್ಯತೀರ್ಥರು ಕಳೆದ ದಶಮಾಸ

ಮುಂದೆ ಕ್ರಿ.ಶ. ೧೪೪೭ ಪ್ರಭವನಾಮ ಸಂವತ್ಸರದ ವೈಶಾಖ ಶುದ್ಧ ದಶಮಿ ಭಾನುವಾರದಂದು ಲಕ್ಷ್ಮಮ್ಮನಿಗೆ ಪ್ರಸವವೇದನೆ ಪ್ರಾರಂಭವಾಯಿತು. ಇನ್ನೇನು ಪುತ್ರ ಜನನವಾಗುತ್ತದೆ ಎಂದೂ ಎಲ್ಲರೂ ಕಾತರದಿಂದ ನಿರೀಕ್ಷಿಸುತ್ತಿರುವಾಗ, ಬ್ರಹ್ಮಣ್ಯತೀರ್ಥರು ಕಳುಹಿಸಿಕೊಟ್ಟಿದ್ದ ಎಡಬಲದ ಶಿಷ್ಯರು ಚಿನ್ನದ ಹರಿವಾಣದೊಂದಿಗೆ ಅಲ್ಲಿಗೆ ಬಂದರು. ಅವರು ರಾಮದೇವನಿಗೆ ಅದನ್ನು ಇತ್ತು ಹಿಂದಿನ ಗುರುಗಳ ಸಂದೇಶವನ್ನು ತಿಳಿಸಿದರು. ಮರುಕ್ಷಣದಲ್ಲಿ ಪುತ್ರೋತ್ಸವವು ನಿರಾತಂಕವಾಗಿ ಆಯಿತು. ಚಿನ್ನದ ಹರಿವಾಣದಲ್ಲಿರುವ ಮಗುವನ್ನು ಕಂಡು ವ್ಯಾಸದಾಸ ಸಾಹಿತ್ಯ ಸಾಮ್ರಾಜ್ಯದ ಬಾಲರವಿಯ ಉದಯವಾಯಿತೆಂದು ಎಲ್ಲರೂ ಹರ್ಷಿಸಿದರು. ಇದನ್ನು ಗುರುಜಗನ್ನಾಥದಾಸರು ಬಹುಸುಂದರವಾಗಿ ವರ್ಣಿಸಿದ್ದಾರೆ.

ಬಳಿಕ ಬರಲಾ ಪ್ರಸವ ಕಾಲದಿ
ಹೊಳೆವ ಮಿಸುಣಿಯ ಪಾತ್ರೆಯೊಳಗೆ
ಪುಳಕಿ ದೊಂದೆ ತೆರದಲಿ ಶಿಶುವು ಕಣ್ಗೊಪ್ಪೆ
ಕಳೆಗಳಿಂದಲಿನಭದಿ ದಿನದಿನ
ಬೆಳೆವ ಚಂದ್ರನೊ ಎನಿಪ ಬಾಲಕ
ಬೆಳಗು ತೋರಿದ ಸೂತಿಕಾ ಗೃಹದೊಳಗೆ
ತಾಜನಿಸಿ
ಅಂಬುಜಾಪ್ತನು ತಾನೆ ಇಳಿದೀ
ಕುಂಭಿಣಿಯಲಿ ಬಂದನೇನೊ
ತುಂಬಿ ಸೂಸುವ ತೇಜದಿಂದಲಿ
ಬಾಲ ಶೋಭಿಸಿದ
ಸಂಭ್ರಮಾಯಿತು ಮುನಿಗೆ ಹರಿಪ್ರತಿ
ಬಿಂಬ ನಾಗಿಹ ಬಾಲರೂಪವ
ನಂಬಕ (ಅಂಬಕ) ದ್ವಯದಿಂದ
ನೋಡಿ ಹರುಷ ಪುಲಕಾಂಕ
ಆಗ ಯತಿವರ ಬಂದು ಶಿಶುವಿನ
ವೇಗ ಸ್ವೀಕರ ಮಾಡಿ ನಡೆದನು
ಸಾಗರೋದ್ಭವ ಸುಧೆಯ
ಕಲಶವ ಗರುಡನೊಯ್ದಂತೆ

ರಾಮದೇವ ದಂಪತಿಗಳು ಈ ಹಿಂದೆ ಒಪ್ಪಿಕೊಂಡಿದ್ದ ಷರತ್ತಿಗೆ ಅನುಗುಣವಾಗಿ ಮಗುವನ್ನು ಹತ್ತುದಿನಗಳಕಾಲ ಪೋಷಿಸಿ, ತಮ್ಮಮೈಲಿಗೆ ಕಳೆದ ಮೇಲೆ, ಚಿನ್ನದ ಹರಿವಾಣದಲ್ಲಿ ಅದನ್ನು ಇರಿಸಿ, ಮುದ್ದಿನ ಮುದ್ದೆಯಂತಿದ್ದ ಆ ರತ್ನವನ್ನು ಬಿಡಲಾರದ ಮನಸ್ಸಿನಿಂದ ಬಿಟ್ಟು ಗುರುಗಳಾದ ಬ್ರಹ್ಮಣ್ಯತೀರ್ಥರ ಸನ್ನಿಧಾನಕ್ಕೆ ಕಳುಹಿಸಿಕೊಟ್ಟರು.

ಬ್ರಹ್ಮಣ್ಯತೀರ್ಥರು ಆ ತೇಜಸ್ವೀ ಬಾಲಕನನ್ನು ನೋಡಿ ಆನಂದ ತುಂದಿಲರಾದರು. ತಮ್ಮ ಕರಕಮಲಸಂಜಾತನೆನಿಸುವ ಆ ಭಾವಿ ಶಿಷ್ಯರತ್ನವನ್ನು ನೋಡಿ ಹಿಗ್ಗಿದರು ಅವರು. ಇಂಥಾಭಾಗ್ಯ ತಮ್ಮದಾದುದಕ್ಕೆ ತಮ್ಮ ಆರಾಧ್ಯದೈವವಾದ ಶ್ರೀ ಮೂಲಗೋಪಾಲಕೃಷ್ಣನನ್ನು ಮನಸಾರ ಕೊಂಡಾಡಿದರು. ಇಂಥ ಪುತ್ರಭಿಕ್ಷೆಯನ್ನು ನೀಡಿದ ವೇದವ್ಯಾಸರನ್ನು ಮನದಣಿಯೆ ಸ್ತುತಿಸಿದರು. ಮಗುವನ್ನು ಪರಿಗ್ರಹಿಸಿ ಅದರ ಲಾಲನೆ ಪಾಲನೆಗಳಿಗೆ ಗಮನವಿತ್ತರು.

ಅವರು ಮಗುವಿನ ಮುಂದಿನ ಭವಿಷ್ಯವನ್ನು ತಮ್ಮ ಅಪರೋಕ್ಷದಿಂದ ತಿಳಿದು, ಯತಿರಾಜನೆಂದು ನಾಮಕರಣಮಾಡಿದನು. ಈಗ ಬ್ರಹ್ಮಣ್ಯತೀರ್ಥರೇ ಮಗುವಿನ ತಂದೆ, ತಾಯಿ, ಬಂಧು, ಬಳಗ, ಗುರು, ದೈವ ಸಮಸ್ತವೂ ಆದರು.

ಪ್ರಹ್ಲಾದನು ನಾರದರ ಉಪದೇಶವನ್ನು ಗರ್ಭದಲ್ಲಿ ಇರುವಾಗಲೇ ಕೇಳಿ ಭಕ್ತಶ್ರೇಷ್ಠನಾದಂತೆ ಗರ್ಭದಲ್ಲಿರುವಾಗಲೇ ಯತ್ಯಾಶ್ರಮ ಸ್ವೀಕರಿಸಿದ್ದ ಯತಿರಾಜನು ಆಗರ್ಭ ಸನ್ಯಾಸಿ ಅಥವಾ ಜನ್ಮತಃ ಸನ್ಯಾಸಿಯಾಗಿದ್ದನು.

ಬ್ರಹ್ಮಣ್ಯತೀರ್ಥರು ತಮ್ಮ ಬೆಳಗಿನ ಪೂಜೆ ಮುಗಿಸಿಕೊಂಡು, ಮಗುವನ್ನು ತೆಗೆದುಕೊಂಡು ಕಣ್ವ ನದಿಗೆ ಹೋಗುತ್ತಿದ್ದರು. ಅನಂತರ ಅಲ್ಲಿನ ಶ್ವೇತ ಶಿಲಾಮಡುವಿನಲ್ಲಿ ಅದರ ಮೈತೊಳೆದು, ಶ್ರೀಮತ್ಸಮೂರ್ತಿಗೆ ಅಭಿಷೇಕ ಮಾಡಿದ ಗೋಕ್ಷೀರವನ್ನು ಅದಕ್ಕೆ ಕುಡಿಸುತ್ತಿದ್ದರು. ಅನಂತರ ಮಡಿ ಮಾಡಿದ ಕಾಷಾಯವಸ್ತ್ರವನ್ನು ಹಾಕಿದ ಮೃದುವಾದ ಕೃಷ್ಣಾಜಿನದ ಹಾಸಿಗೆಯಲ್ಲಿ ಮಲಗಿಸುತ್ತಿದ್ದರು. ಮಗುವಿನ ಮುಂದೆ ಸಂಸ್ಕೃತ ಮತ್ತು ಕನ್ನಡ ಸ್ತೋತ್ರಗಳನ್ನು

ಹೇಳಿ ರಂಜಿಸುತ್ತಿದ್ದರು. ಈ ಮನೋಜ್ಞ ಲಾಲನಾ ಪರಿಯನ್ನು ಗುರುಜಗನ್ನಾಥದಾಸರು ಅತ್ಯಂತ ರಮಣೀಯವಾಗಿ ವರ್ಣಿಸಿರುವರು. ಅದರಲ್ಲಿ ಒಂದು ಪದ್ಯ ಹೀಗಿದೆ.

ಬಾಲಲೀಲೆಯ ನೋಡಿ ಹಿಗ್ಗುವ
ಲಾಲನೆಯ ತಾ ಮಾಡಿ ಪಾಡುವ
ಲೋಲ ಕುಂತಲ ಮುಖವ ಚುಂಬಿಪ
ಗೋಪಿಯಂದದಲಿ
ಪಾಲಸಾಗರಶಯನಪದಯುಗ
ಲೋಲ ಬಾಲಕ ಎನಗೆ ದೊರೆತನು
ಪೇಳಲೇನಿಹುದೆನ್ನ ಪುಣ್ಯದ ಫಲವೆ
ಫಲಿಸಿಹದೋ

ಬ್ರಹ್ಮಣ್ಯತೀರ್ಥರು ತಮ್ಮ ಸಮಯವನ್ನೆಲ್ಲಾ ಯತಿರಾಜನ ಯೋಗಕ್ಷೇಮದಲ್ಲೇ ಕಳೆಯುತ್ತಿದ್ದರು. ಯತಿರಾಜನು ಈ ಯತಿಶ್ರೇಷ್ಠರ ಆರೈಕೆಯಲ್ಲಿ ಯಾವ ಮಾತೃಪಾಲನೆಯನ್ನೂ ಮೂದಲಿಸುವಂತೆ, ಕದಳಿಕುಡಿಯಂತೆ ಬೆಳೆದನು. ಯತಿರಾಜನು ಆರೋಗ್ಯವೇ ಮೈವೆತ್ತಂತೆ ಸುಂದರ ಬಾಲಕನಾಗಿದ್ದನು. ಸೂರ್ಯನು ಆರೋಗ್ಯ ಕಾರಕನೆಂಬ ವಚನವಿದೆ. ಅಂತಹ ಸೂರ್ಯಾಂಶದಿಂದ ಹುಟ್ಟಿದವರು ಬ್ರಹ್ಮಣ್ಯತೀರ್ಥರು. ಅವರ ಕೈಲಿ ಯತಿರಾಜನು ಆರೋಗ್ಯಶಾಲಿಯಾಗಿ ಬೆಳೆದನೆಂದರೆ ಆಶ್ಚರ್ಯವೇನು?

ಯತಿರಾಜನು ಬೆಳೆದು ಐದುವರ್ಷದ ಬಾಲಕನಾದನು. ಬ್ರಹ್ಮಣ್ಯತೀರ್ಥರು ಬನ್ನೂರಿನಿಂದ ತಂದೆ ತಾಯಿಗಳಾದ ರಾಮದೇವ ಲಕ್ಷ್ಮಮ್ಮರನ್ನು ಕರೆಸಿಕೊಂಡು ಉಪನಯನ ಮಾಡಿಸಿದರು. ಏಳನೆ ವಯಸ್ಸಿನಲ್ಲಿ ಅವನಿಗೆ ಸನ್ಯಾಸವನ್ನು ಕೊಟ್ಟು ಪದ್ಧತಿಯಂತೆ ಪ್ರಣವ ಮಂತ್ರವನ್ನು ಉಪದೇಶಿಸಿದರು. ಅವನು ವೇದವ್ಯಾಸರ ಅನುಗ್ರಹದಿಂದ ಹುಟ್ಟಿದವನಾದುದರಿಂದ ವ್ಯಾಸತೀರ್ಥರೆಂದು ಆಶ್ರಮನಾಮವನ್ನಿಟ್ಟರು.

ಮುಂದೆ ಬ್ರಹ್ಮಣ್ಯತೀರ್ಥರು ಅವರ ಮುಂದಿನ ವಿದ್ಯಾಭ್ಯಾಸಕ್ಕೆ ತಮ್ಮ ಪೂರ್ವಾಶ್ರಮದ ಬಂಧುಗಳೂ, ಮಹಾವಿದ್ವಾಂಸರೂ ಆಗಿದ್ದ ಶ್ರೀಪದ್ಮನಾಭತೀರ್ಥರ ಪರಂಪರೆಯಲ್ಲಿ ಬಂದ ಶ್ರೀಪಾದರಾಜನೆಂಬ ಅಭಿಧಾನದಿಂದ ಪ್ರಸಿದ್ಧರಾದ ಲಕ್ಷ್ಮೀನಾರಾಯಣತೀರ್ಥರ ಬಳಿಗೆ (ಮುಳುಬಾಗಿಲಿಗೆ) ಕಳುಹಿಸಿದರು.

ಬ್ರಹ್ಮಣ್ಯತೀರ್ಥರು ವ್ಯಾಸರಾಯರನ್ನು ಶ್ರೀಪಾದರಾಜರಿಗೆ ಒಪ್ಪಿಸುತ್ತಾ "ಇವರು ಇನ್ನು ಮೇಲೆ ನಮ್ಮ ಪುತ್ರರಲ್ಲ. ನಿಮ್ಮ ಪುತ್ರರು" ಎಂದು ನುಡಿದರು. ಆಗ ಶ್ರೀಪಾದರಾಯರು ಮುಗುಳ್ನಗೆ ನಗುತ್ತಾ "ಇವರು ನಿಮ್ಮ ಪುತ್ರರೂ ಅಲ್ಲ. ನಮ್ಮ ಪುತ್ರರೂ ಅಲ್ಲ. ಲೋಕದ ಸಜ್ಜನರನ್ನು ಉದ್ಧರಿಸುವ ಸಲುವಾಗಿ ಹುಟ್ಟಿರುವ ಶ್ರೀಹರಿಯ ಸುಪುತ್ರರು" ಎಂದು ಉದ್ಗಾರ ತೆಗೆದರು.

ಒಂದು ಒಳ್ಳೆಯ ಮುಹೂರ್ತದಲ್ಲಿ ಶ್ರೀಪಾದರಾಜರು ತಮ್ಮ ಸಚ್ಛಿಷ್ಯನಿಗೆ ಪಾಠ ಪ್ರವಚನಗಳನ್ನು ಆರಂಭಿಸಿದರು. ವ್ಯಾಸರಾಯರು ಶ್ರೀಪಾದರಾಜರ ಬಳಿ ಹನ್ನೆರಡು ವರ್ಷಗಳಕಾಲ ವಿದ್ಯಾಭ್ಯಾಸ ಮಾಡಿದರು. ಈ ಅವಧಿಯಲ್ಲಿ ಅವರು ತರ್ಕ, ವ್ಯಾಕರಣ, ಮೀಮಾಂಸವೇ ಮೊದಲಾದ ಸಕಲಶಾಸ್ತ್ರಗಳನ್ನು ಕರತಲಾಮಲಕಮಾಡಿಕೊಂಡರು. ಅವರ ನಿಶಿತವಾದ ಬುದ್ಧಿಗೆ, ಅದ್ಭುತ ಜ್ಞಾಪಕಶಕ್ತಿಗೆ ನಿಲುಕದ ಶಾಸ್ತ್ರ ವಿಷಯ ಉಳಿಯಲಿಲ್ಲ.

ಸರಸ್ವತಿಯೇ ಸತ್ಯಲೋಕ ಬಿಟ್ಟು ವ್ಯಾಸರಾಯರ ಜಿಹ್ವೆಯಲ್ಲಿ ನೆಲೆಸಲು ಬಂದುದನ್ನು ನೋಡಿ ಬ್ರಹ್ಮದೇವರು ಅವರಿಗೆ ದೀರ್ಘಾಯುಸ್ಸನ್ನು ಬರೆದು, ಅವರ ವದನದಲ್ಲಿ ನೆಲೆಸಿದ್ದರಂತೆ, ಎಂದು ಒಬ್ಬ ಕವಿ ವರ್ಣಿಸಿದ್ದಾನೆ. ಅರ್ಥಾತ್ ವ್ಯಾಸರಾಯರ ಮುಖದಲ್ಲಿ ಅಸದೃಶವಾದ ಬ್ರಹ್ಮವರ್ಚಸ್ಸಿತ್ತೆಂಬುದೇ ಇಲ್ಲಿ ಕವಿಯ ಹೃದಯ. ಸೂರ್ಯ ಚಂದ್ರರು ವ್ಯಾಸರಾಯರ ಬ್ರಹ್ಮಚರ್ಯದಿಂದ ಬಂದ ವರ್ಚಸ್ಸಿಗೆ ಮಾರುಹೋಗಿ ಅಸೂಯೆ ಪಟ್ಟರಂತೆ. ಅಷ್ಟದಿಕ್ಪಾಲಕರೇ ಮೊದಲಾದ ದೇವತೆಗಳು ವ್ಯಾಸರಾಯರ ಕೃಪೆಗೆ ಪಾತ್ರರಾಗಲು ಅವರ ಹಿಂದೆ ಮಕ್ಕಳಂತೆ ಸುತ್ತುತ್ತಿದ್ದರಂತೆ. ಅವರು ಇಚ್ಛಿಸಿದುದು ಅಲ್ಲೆ ದೊರೆಯುವಂತೆ ಮಾಡಲು ಅವರು ಹಾತೊರೆಯುತ್ತಿದ್ದರಂತೆ. ಇಷ್ಟಾದರೂ ಅವರನ್ನು ವ್ಯಾಸರಾಯರು ಉಪೇಕ್ಷೆಯಿಂದ ಕಾಣುತ್ತಿದ್ದರಂತೆ.

ವ್ಯಾಸರಾಯರು ಪ್ರತಿ ದಿನವೂ ಪಾಠ ಪ್ರವಚನಗಳು ಆದನಂತರ ಅಲ್ಲಿದ್ದ ಒಂದು ಪುಟ್ಟ ಗುಹೆಯಲ್ಲಿ ಕುಳಿತು, ಅಂದಿನ ಪಾಠವನ್ನು ಮನನ ಮಾಡುತ್ತಲೋ; ತಮಗೆ ಪ್ರಿಯವಾದ ಗ್ರಂಥವನ್ನು ವ್ಯಾಸಂಗ ಮಾಡುತ್ತಲೊ. ಅಥವಾ ಯಾವುದಾದರೂ ಗಹನವಾದ ವಿಷಯವನ್ನು ಕುರಿತು ಚಿಂತಿಸುತ್ತಲೊ ಕುಳಿತುಕೊಳ್ಳುತ್ತಿದ್ದರು. ಒಂದುದಿನ ಶ್ರೀಪಾದರಾಜರ ಮಠದ ಮೂಲ ಪುರುಷರಾದ ಶ್ರೀಪದ್ಮನಾಭತೀರ್ಥರು ವ್ಯಾಸರಾಯರನ್ನು ಅನುಗ್ರಹಿಸಲು ಸರ್ಪರೂಪದಿಂದ ಬಂದು ಧ್ಯಾನಾಸಕ್ತರಾದ ವ್ಯಾಸರಾಯರನ್ನು ಸುತ್ತಿ ತಲೆಯಮೇಲೆ ಹೆಡೆಯನ್ನು ಆಡಿಸುತ್ತಾ ನಿಂತರು. ಶ್ರೀಪಾದರಾಜರು ಈ ದೃಶ್ಯವನ್ನು ಕಣ್ಣಾರ ಕಂಡು, ತಮ್ಮ ಶಿಷ್ಯನ ಮೇಲೆ ಮಾಡಿದ ಪದ್ಮನಾಭತೀರ್ಥರ ದಿವ್ಯಾನುಗ್ರಹದಿಂದ ಆನಂದ ತುಂದಿಲರಾಗಿ ಅವರನ್ನೂ, ಆ ಮೂಲಕ ಶೇಷದೇವರನ್ನೂ ಕೊಂಡಾಡಿದರು. ಆಗ ಆ ಸರ್ಪವು ವ್ಯಾಸರಾಯರ ದೇಹವನ್ನು ಬಿಟ್ಟು ಸದ್ದಿಲ್ಲದೆ ಅಲ್ಲಿಂದ ಕಣ್ಮರೆಯಾಯಿತು.

ಮತ್ತೊಂದು ದಿನ ಶ್ರೀಪಾದರಾಜರು ವ್ಯಾಸರಾಯರಿಗೆ ಸಂಸ್ಥಾನದ ವಿಗ್ರಹಗಳನ್ನು ಪೂಜಿಸಲು ಹೇಳಿ ತಾವು ಅಭ್ಯಂಜನ ಸ್ನಾನಕ್ಕೆ ತೆರಳಿದರು. ಶ್ರೀಪಾದರಾಜರಿಗೆ ಪಂಢರಾಪುರದ ಭೀಮರಥೀ ತೀರದಲ್ಲಿ ಎರಡು ಸಂಪುಟಗಳು ದೊರೆತಿದ್ದವು. ಒಂದು ಸಂಪುಟದಲ್ಲಿ ಶ್ರೀರಂಗವಿಠಲ ಮೂರ್ತಿ ಇತ್ತು. ಮತ್ತೊಂದು ಸಂಪುಟ ಎಷ್ಟು ಪ್ರಯತ್ನಿಸಿದರೂ ತೆರೆಯಲು ಸಾಧ್ಯವಾಗಲಿಲ್ಲ. ಆ ಎರಡನೇ ಸಂಪುಟವನ್ನು ತೆರೆದು ಪೂಜಿಸುವ ಭಾಗ್ಯಶಾಲಿಯನ್ನು ಇದಿರುನೋಡುತ್ತಾ ಸಂಪುಟವನ್ನೇ ಪೂಜಿಸುತ್ತಾ ಬಂದಿದ್ದರು. ಇಂದು ವ್ಯಾಸರಾಯರು ಪ್ರತಿಮೆಗಳನ್ನು ಜೋಡಿಸುತ್ತಾ ಎರಡನೇ ಸಂಪುಟವನ್ನು ಕೈಗೆತೆಗೆದುಕೊಂಡು ಅನಾಯಾಸದಿಂದ ಅದನ್ನು ತೆಗೆದರು. ಅದರಲ್ಲಿ ಗೋಪಾಲ ಕೃಷ್ಣನ ವಿಗ್ರಹವಿತ್ತು. ಆ ಮೋಹನ ಮುರಾರಿಯನ್ನು ನೋಡಿ ವ್ಯಾಸರಾಯರು ಮೈಮರೆತು, ತಟ್ಟೆಯಲ್ಲಿದ್ದ ಎರಡು ಶಾಲಗ್ರಾಮಗಳನ್ನು ತಾಳಗಳಾಗಿ ಬಡೆಯುತ್ತಾ ಹಾಡಿ ಕುಣಿಯಹತ್ತಿದರು. ಭಕ್ತ ಬಂಧು ತಾನೂ ವ್ಯಾಸರಾಯರೊಡನೆ ನರ್ತಿಸ ಹತ್ತಿದನು. ಅಭ್ಯಂಜನ ಸ್ನಾನ ಮುಗಿಸಿ ಹೊರಬಂದ ಶ್ರೀ ಪಾದರಾಜರು ಈ ದೃಶ್ಯವನ್ನು ನೋಡಿ ತಾವೂ ಮೈಮರೆತರು. ಅಷ್ಟರವರೆಗೆ ವ್ಯಾಸರಾಯರೊಡನೆ ನಲಿಯುತ್ತಿದ್ದ ಗೋಪಾಲನು ಹಠಾತ್ತಾನೆ ಎಡಗಾಲನ್ನು ಬಲಗಾಲಿನ ಮೇಲೆ ಹಾಕಿ ನಿಂತನು. ಅನಂತರ ಶ್ರೀಪಾದರಾಜರು ತಾಳವಾಗಿ ಉಪಯೋಗಿಸಲ್ಪಟ್ಟ ಶಾಲಗ್ರಾಮಗಳನ್ನು, ಶ್ರೀವೇಣುಗೋಪಾಲ ಶ್ರೀರುಕ್ಮಿಣೀ ಸತ್ಯಭಾಮಾ ಪ್ರತಿಮಗಳೊಡನೆ ವ್ಯಾಸರಾಯರಿಗೆ ಕರುಣಿಸಿಕೊಟ್ಟರು.

ವ್ಯಾಸರಾಯರ ಗುರುಕುಲವಾಸ ಮುಗಿಯಿತು. ಗುರುಗಳಾದ ಶ್ರೀಪಾದರಾಜರ ಆಜ್ಞೆಪಡೆದು ಅಬ್ಬೂರಿಗೆ ಬಂದರು. ಅಬ್ಬೂರಿಗೆ ಬಂದ ಅಲ್ಪಕಾಲದಲ್ಲಿ ಬ್ರಹ್ಮಣ್ಯತೀರ್ಥರು ವೃಂದಾವನಸ್ಥರಾದುದರಿಂದ, ಶ್ರೀ ವಿದ್ಯಾಸಂಸ್ಥಾನವೆಂದು ಹೆಸರುವಾಸಿಯಾಗಿದ್ದ ಶ್ರೀಪೂರ್ವಾದಿ ಮಠಕ್ಕೆ ಕ್ರಿ.ಶ. ೧೪೭೮ ನೇ ವೈಶಾಖ ಬಹುಳ ದ್ವಾದಶಿ ದಿನ ವಿಧ್ಯುಕ್ತವಾಗಿ ಅಧಿಪತಿಗಳಾದರು.

ಅವರು ಧರ್ಮ ಪ್ರಚಾರಕ್ಕಾಗಿ ದೇಶಾಟನೆಯನ್ನು ಕೈಗೊಂಡರು. ವ್ಯಾಸರಾಯರು ಒಂದಕ್ಕಿಂತ ಹೆಚ್ಚುಬಾರಿ ಉತ್ತರ ಭಾರತದ ಯಾತ್ರೆಯನ್ನು

ದಕ್ಷಿಣ ಭಾರತದ ಯಾತ್ರೆಯನ್ನು ಕೈಗೊಂಡಿದ್ದರು. ಅಲ್ಲಲ್ಲಿ ಅನೇಕ ಮಹಾವಿದ್ಯಾಲಯಗಳನ್ನು ಸ್ಥಾಪಿಸಿದರು. ವ್ಯಾಸರಾಯರು ಎರಡನೆಯ ಬಾರಿ ಉತ್ತರ ಭಾರತದ ಯಾತ್ರೆಯನ್ನು ಕೈಗೊಂಡು ಪ್ರಯಾಗ, ಹರಿದ್ವಾರ, ಗಯಾ, ಕಾಶಿ, ಬಂಗಾಳದ ನವದ್ವೀಪಗಳ ವಿದ್ಯಾಕೇಂದ್ರಗಳನ್ನು ಸಂದರ್ಶಿಸಿ ಬಂದಿದ್ದರು. ವಂಗದೇಶದಲ್ಲಿ ಚೈತನ್ಯಸಂಪ್ರದಾಯದ ಶಿಷ್ಯರಿಗೆ ವೈಷ್ಣವ ದೀಕ್ಷೆಯನ್ನು ನೀಡಿದ್ದರು.

ಈ ಅವಧಿಯಲ್ಲಿ ವಿದ್ಯಾಗುರುಗಳಾದ ಶ್ರೀಪಾದರಾಜರೊಡನೆ ಚಂದ್ರಗಿರಿಗೆ ಹೋದರು. ಶ್ರೀಪಾದರಾಜರ ಅನುಗ್ರಹ ವಿಶೇಷದಿಂದ ಆ ಕಾಲದ ವಿಜಯನಗರ ಸಾಮ್ರಾಜ್ಯಾಧಿಪತಿಯಾದ ಸಾಳುವ ನರಸಿಂಹರಾಯನು ತನಗೆ ಸಂಪ್ರಾಪ್ತವಾದ ಬ್ರಹ್ಮಹತ್ಯಾದೋಷದಿಂದ ಮುಕ್ತನಾಗಿದ್ದನು. ತನಗೆ ಪುನರ್ಜನ್ಮವಿತ್ತ ಶ್ರೀಪಾದರಾಜರನ್ನು ರತ್ನಸಿಂಹಾಸನದ ಮೇಲೆ ಕೂಡಿಸಿ ಸಾಮ್ರಾಟನಿಗೆ ಸಲ್ಲುವ ಗೌರವವನ್ನು ಸಲ್ಲಿಸಿದನು. ಇಷ್ಟರಿಂದಲೇ ತೃಪ್ತನಾಗದೆ ಅವರನ್ನು ಒತ್ತಾಯಮಾಡಿ ತನ್ನ ಕುಲಗುರುಗಳನ್ನಾಗಿ ಮಾಡಿಕೊಂಡಿದ್ದನು. ಮುಂದೆ ವೃದ್ಧಾಪ್ಯದಲ್ಲಿದ್ದ ಅವರು, ಸ್ವಸ್ಥಾನವಾದ ಮುಳಬಾಗಿಲನ್ನು ಸೇರಬೇಕೆಂದು ಬಯಸಿ ರಾಜನ ಕೋರಿಕೆಯಂತೆ ಅರ್ಚಕರಿಲ್ಲದೆ ಪೂಜಾಕೈಂಕರ್ಯಗಳು ನಿಂತುಹೋಗಿದ್ದ ಶ್ರೀನಿವಾಸನ ಸನ್ನಿಧಿಯಲ್ಲಿ ಪುನಃ ಆ ವ್ಯವಸ್ಥೆಯನ್ನು ಮಾಡಬೇಕೆಂದು ವ್ಯಾಸರಾಯರಿಗೆ ಆದೇಶವಿತ್ತನು.

ವ್ಯಾಸರಾಯರು ಗುರುಗಳ ಆಜ್ಞೆಯಂತೆ ತಿರುಪತಿಗೆ ಬಂದರು. ಅವರು ಪುಣ್ಯವೇ ಮೈವೆತ್ತಂತೆ ನಿಂತ ಏಳುಬೆಟ್ಟಗಳ ಒಡೆಯನನ್ನು ಕಾಣಲು ನಡೆದು ಬರಲು ಇಷ್ಟಪಡಲಿಲ್ಲ. ಇಡೀ ಬೆಟ್ಟವು ಹೆಡೆ ಬಿಚ್ಚಿದ ಆದಿಶೇಷನಂತೆ ಅವರ ಕಣ್ಣುಗಳಿಗೆ ಗೋಚರಿಸಿತು. ಅದು ಅವರ ಕಣ್ಣಿಗೆ ಅಖಂಡ ಶಾಲಗ್ರಾಮದಂತೆ ಕಂಗೊಳಿಸಿತು. ಇಂತಹ ಪವಿತ್ರಬೆಟ್ಟವನ್ನು ಪಾದಗಳಿಂದ ಸೋಕಿಸುವುದು ಪಾಪವೆನಿಸಿ, ಅವರು ಮಂಡಿಯೂರಿ ಮೊಳಕಾಲುಗಳಲ್ಲಿ ಬೆಟ್ಟದ ಮೆಟ್ಟಿಲುಗಳನ್ನೇರಿ ಸ್ವಾಮಿಯ ಸಾನ್ನಿಧ್ಯ ಸೇರಿದರು.

ಇಂತು ಏಳುಬೆಟ್ಟಗಳನ್ನೇರಿ ಸ್ವಾಮಿ ಪುಷ್ಕರಿಣಿಯಲ್ಲಿ ಮಿಂದು ವರಾಹಸ್ವಾಮಿಯನ್ನು ಆರಾಧಿಸಿ ಭಕ್ತವರದನಾದ ಶ್ರೀನಿವಾಸನ ದರ್ಶನವನ್ನು ಪಡೆದರು.

ವ್ಯಾಸರಾಯರು ತಿರುಪತಿಯಲ್ಲಿ ಶ್ರೀನಿವಾಸನನ್ನು ನಿಷ್ಠಾಭಕ್ತಿಗಳಿಂದ ಕ್ರಿ.ಶ. ೧೪೮೬ ರಿಂದ ೧೪೯೮ ರವರೆಗೆ ಅಂದರೆ ಹನ್ನೆರಡು ವರ್ಷಗಳ ಪರ್ಯಂತರ ಸೇವಿಸಿದರು. ಬೆಟ್ಟದ ಮೇಲೆ ವ್ಯಾಸರಾಯರ ದಿನಚರ್ಯೆ ಹೇಗಿತ್ತೆಂಬುದನ್ನು ಗುರುಜಗನ್ನಾಥ ದಾಸರು ಹೀಗೆ ವರ್ಣಿಸಿರುವರು.

ಶೇಷಗಿರಿಯನು ಸಾರ್ದು ವೆಂಕಟ
ಈಶಮೂರ್ತಿಯ ಪೂಜೆ ಸಂತತ
ಆಶೆ ಇಲ್ಲದೆ ಗೈದು ದ್ವಾದಶವರುಷ ಬಿಡದಂತೆ
ಇಳಿದು ಗಿರಿಯನು ಧರಣಿತಳದಲಿ
ಮಲವು ಮೂತ್ರವು ಮಾಡಿ ಮತ್ತೆ
ಜಲಧಿಸ್ನಾನವ ಗೈದು ಪಾಠವ ಹೇಳಿ ಹರಿಪೂಜಾ
ಇಳೆಯ ಸುರವರ ಸಂಘ ಮಧ್ಯದಿ
ಬೆಳಗು ತಿಪ್ಪನು ವ್ಯಾಸಮುನಿಯು
ಕಳೆಗಳಿಂದಲಿ ಪೂರ್ಣ ಚಂದ್ರನು
ನಭಧಿ ತೋರ್ಪಂತೆ

ಹನ್ನೆರಡು ವರ್ಷಗಳು ಕಳೆಯುತ್ತಿರಲು ವ್ಯಾಸರಾಯರು ಪುನಃ ಅರ್ಚಕವಂಶದವರಿಗೆ ಪೂಜೆಯ ಭಾರವನ್ನು ಒಪ್ಪಿಸಿ ಸ್ವಾಮಿಯಿಂದ ಬೀಳ್ಕೊಂಡರು. ಹೊರಡುವ ಮುನ್ನ ವ್ಯಾಸರಾಯರು ಶ್ರೀನಿವಾಸನ ಅಡಿದಾವರೆಗಳಲ್ಲಿ ಶಿರಬಾಗಿ ನಿಂತರು. ನಮಸ್ಕರಿಸಿದ ವ್ಯಾಸರಾಯರ ಮೇಲೆ ಏನೋಬಿದ್ದಂತಾಯಿತು. ವ್ಯಾಸರಾಯರು ನೋಡುತ್ತಾರೆ! ಸ್ವಾಮಿ ಶ್ರೀನಿವಾಸನು ತನ್ನ ಭಕ್ತ ಶ್ರೇಷ್ಠನಿಗೆ ತಾನುಹೊದ್ದಿದ್ದ ಜರತಾರಿ ವಸ್ತ್ರವನ್ನು ಪ್ರೀತಿಯಿಂದ ಅನುಗ್ರಹಿಸಿದ್ದನು. ಸ್ವಾಮಿಯೆ ಕರುಣಿಸಿಕೊಟ್ಟ ಶೇಷವಸ್ತ್ರವನ್ನು ಕಂಡು ವ್ಯಾಸರಾಯರು ಆನಂದಭಾಷ್ಪಸುರಿಸಿದರು. ಅವನ ಮಹಿಮೆಯನ್ನು ಕೊಂಡಾಡಿದರು. ವ್ಯಾಸರಾಯರಿಗೆ ಶ್ರೀನಿವಾಸನು ಅಂದು ಅನುಗ್ರಹಿಸಿದ್ದ ಆ ಶೇಷವಸ್ತ್ರವನ್ನು ವ್ಯಾಸರಾಯಮಠಾಧಿಪತಿಗಳು ದ್ವಾದಶಿಯ ದಿನ ಹೊದೆಯುವ ಪದ್ಧತಿ ಇಂದಿಗೂ ನಡೆದು ಬಂದಿದೆ. ವ್ಯಾಸರಾಯರು ಶ್ರೀನಿವಾಸನ ಕೈಂಕರ್ಯ ಮಾಡಿದುದರ ಉಲ್ಲೇಖ ಅನೇಕ ಶಾಸನಗಳಲ್ಲಿ ಬರುತ್ತದೆ.

ಮುಂದೆ ತಿರುಪತಿಯಿಂದ ವ್ಯಾಸರಾಯರು ಶ್ರೀರಂಗಕ್ಕೆ ತೆರಳಿದರು. ಶ್ರೀರಂಗದಲ್ಲಿ ಶೈವರಿಗೂ, ವೈಷ್ಣವರಿಗೂ ತಮ್ಮ ದೇವಾಲಯಗಳ ಗುಡಿ ವಿಷಯದಲ್ಲಿ ವಿವಾದ ಉಂಟಾಗಿ ಅದು ವಿಪರೀತಕ್ಕೆ ಹೋಗಿತ್ತು. ಶ್ರೀ ರಂಗನಾಥದೇವಾಲಯವನ್ನು ಕೇಂದ್ರವಾಗಿರಿಸಿಕೊಂಡ ವೈಷ್ಣವರೂ, ಜಂಬುಕೇಶ್ವರ ದೇವಾಲಯವನ್ನು ಕೇಂದ್ರವಾಗಿರಿಸಿಕೊಂಡ ಶೈವರೂ ವೃಥಾ ಮತೀಯ ಕಲಹಗಳಲ್ಲಿ ತೊಡಗಿದ್ದರು. ಅದು ಆಸ್ಫೋಟಕಸ್ಥಿತಿಗೆ ಬಂದುದನ್ನು ಕೇಳಿ ವ್ಯಾಸರಾಯರು ಚತುರತೆಯಿಂದ ಈ ವಿವಾದವನ್ನು ಬಗೆಹರಿಸಿ, ಉಭಯ ಪಕ್ಷದವರೂ ಒಪ್ಪಿದ ಗಡಿಯಲ್ಲಿ ಒಂದು ಆಂಜನೇಯ ವಿಗ್ರಹವನ್ನು ಪ್ರತಿಷ್ಠಿಸಿದರು. ಇದನ್ನು ಎಲ್ಲೆಕಲ್ಲು ಆಂಜನೇಯನೆಂದು ಅಲ್ಲಿನ ಭಕ್ತಜನ ಈಗಲೂ ಪೂಜಿಸುತ್ತಿದ್ದಾರೆ.

ವ್ಯಾಸರಾಯರು ತಾವು ಹೋದೆಡೆಯಲ್ಲೆಲ್ಲಾ ವಾಯುದೇವರ ಅವತಾರ ಮೂರುತಿಯ ಪ್ರತಿಮೆಗಳನ್ನು ಪ್ರತಿಷ್ಠಿಸಿ ಸಜ್ಜನರ ಉದ್ಧಾರಕ್ಕೆ ನೆರವಾಗಿದ್ದರು. ಇಂಥಾ ಏಳುನೂರು ಮುವತ್ತೆರಡು ಪ್ರಾಣದೇವರ ಪ್ರತೀಕಗಳನ್ನು ಅವರು ಪ್ರತಿಷ್ಠಿಸಿದ್ದರೆಂದು ಪ್ರತೀತಿ ಇದೆ. ಹಂಪೆಯಲ್ಲಿ ಚಕ್ರತೀರ್ಥದ ಬಳಿಯಲ್ಲಿ ತಮ್ಮ ತಪಸ್ಸನ್ನು ಧಾರೆಯೆರೆದು ಪ್ರಾಣದೇವರನ್ನು ಪ್ರತಿಷ್ಠಿಸಿದರು. ಮರುದಿನ ಮೂರ್ತಿ

(27ನೇ ಪುಟ ನೋಡಿ)

## ಶ್ರೀ ವೇಂಕಟೇಶ ಪ್ರಪತ್ತಿಃ

ಈಶಾನಾಂ ಜಗತೋಽಸ್ಯ ವೇಂಕಟಪತೇಃ ವಿಷ್ಣೋಃ ಪರಾಂ ಪ್ರೇಯಸೀಂ
ತದ್ವಕ್ಷಃಸ್ಥಲನಿತ್ಯವಾಸರಸಿಕಾಂ ತತ್ ಕ್ಷಾಂತಿ ಸಂವರ್ಧಿನೀಮ್,
ಪದ್ಮಾಲಂಕೃತ ಪಾಣಿಪಲ್ಲವಯುಗಾಂ ಪದ್ಮಾಸನಸ್ಥಾಂ ಶ್ರಿಯಂ
ವಾತ್ಸಲ್ಯಾದಿ ಗುಣೋಜ್ವಲಾಂ ಭಗ ವತೀಂ ವಂದೇ ಜಗನ್ಮಾತರಮ್. ೧

ಈ ಜಗತ್ತಿಗ ಆಧೀಶ್ವರಿಯೂ, ಶ್ರೀ ವೇಂಕಟಾಚಲಪತಿಯು ಪರಮ ಪ್ರೇಯಸಿಯೂ, ಆತನ ವಕ್ಷಸ್ಥಲದಲ್ಲಿ ನಿತ್ಯವಾಸರಸಿಕಳೂ, ಆತನ ಕ್ಷಮಾಗುಣವನ್ನು ಸಂವರ್ಧನೆಗೊಳಿಸುವವಳೂ, ಪದ್ಮಗಳಿಂದ ಅಲಂಕೃತವಾದ ಚಿಗುರಿನಂತಹ ಎರಡು ಕೈಗಳುಳ್ಳವಳೂ, ಪದ್ಮಾಸನಾಸೀನಳೂ, ವಾತ್ಸಲ್ಯಾದಿ ಗುಣಗಳಿಂದ ಉಜ್ವಲಳೂ, ಜಗನ್ಮಾತ್ರೆಯೂ ಆದ ಶ್ರೀದೇವಿಯನ್ನು ನಮಸ್ಕರಿಸುತ್ತೇನೆ.

ಈ ಪದ್ಯದಿಂದ ಶ್ರೀವೇಂಕಟೇಶ ಪ್ರಪತ್ತಿಯು ಆರಂಭವಾಗುವುದು. "ಪ್ರಪತ್ತಿ" ಎಂದರೆ ಶರಣಾಗತಿ. ಶ್ರೀವೇಂಕಟೇಶನ ಪಾದಾರವಿಂದಗಳ ಶರಣಾಗತಿಯೇ ಈ ಸ್ತೋತ್ರದ ರಹಸ್ಯ. ಮುಖ್ಯವಾಗಿ ಮುಮುಕ್ಷುವಾದವನಿಗೆ ಪ್ರಪತ್ತಿ ಅಥವಾ ಶರಣಾಗತಿ ಸುಲಭವೂ, ಶೀಘ್ರ ಫಲಪ್ರದವೂ ಆಗಿರುವ ಉಪಾಯ. ಸಂಪ್ರದಾಯ ನಿಷ್ಠರು ಯಾವ ಮಂತ್ರರತ್ನವನ್ನು ಗುರುಪರಂಪರೆಯಿಂದ ಅರಿತು ಅನುಷ್ಠಾನಪರರರಾಗಿ ತಮ್ಮ ಜನ್ಮವನ್ನು ಸಾರ್ಥಕವನ್ನಾಗಿ ಮಾಡಿಕೊಳ್ಳುವರೋ, ಯಾವ ರಹಸ್ಯವನ್ನು ಗೀತಾಚಾರ್ಯನಾದ ಶ್ರೀಕೃಷ್ಣನು ಶಿಷ್ಯನಾದ ಅರ್ಜುನನಿಗೆ ಉಪದೇಶಿಸುವ ರೀತಿಯಿಂದ ಜಗತ್ತಿಗೇ ಬೋಧಿಸಿರುವನೋ, ಯಾವುದೊಂದನ್ನು ಮನನ ಮಾಡಿದರೆ ಮತ್ತೊಂದನ್ನು ಮನನ ಮಾಡಬೇಕಾಗಿಯೇ ಇಲ್ಲವೋ, ಯಾವುದರಿಂದ ಸಾವಿರಾರು ಜನ್ಮಗಳ ಅಜ್ಞಾನವು ತೊಲಗಿ ಜ್ಞಾನಿಯಾಗಿ -- ವಾಸುದೇವನೇ ಸರ್ವಸ್ವನೆಂದು ಚೇತನನು ನಂಬುವನೋ, ಯಾವುದೊಂದನ್ನು ತಿಳಿಯುವುದಕ್ಕಾಗಿ ಮಹಾ ಮೇಧಾವಿಗಳೂ, ರಾಜಶ್ರೇಷ್ಠರೂ, ಶಾಸ್ತ್ರಪಾರಂಗತರೂ ತಿಳಿದವರ ಬಳಿಯಲ್ಲಿ ವರ್ಷ ವರ್ಷಗಳಕಾಲ ಅಲೆಯುತ್ತಿದ್ದರೋ, ಯಾವುದೊಂದನ್ನು ಪ್ರಕಟಿಸುವುದರ ದೆಸೆಯಿಂದ ಆಚಾರ್ಯರು ಉದಾರ ಚರಿತರೆಂದು ಖ್ಯಾತಿಗೊಂಡಿರುವರೋ, ಯಾವುದರ ಮಹಿಮೆಯು ಸ್ತ್ರೀ -- ಪುರುಷರು, ಬಾಲ--ವೃದ್ಧರು, ತಿರ್ಯಕ್ -- ಮಾನವರೇ ಮೊದಲಾದ ಯಾವ ಭೇದಗಳನ್ನೂ ಎಣಿಸದೆ ಸರ್ವವ್ಯಾಪಿಯಾಗಿರುವುದೋ ಮತ್ತು ಯಾವುದೊಂದರಲ್ಲಿಯೇ ಮುಮುಕ್ಷುಗಳು ನಿರ್ಭರರಾಗಿರುವರೋ ಅಂತಹ ಮಂತ್ರರತ್ನದ ಸಾರವೇ ಈ ಪ್ರಪತ್ತಿ. ಆದುದರಿಂದಲೇ 'ದ್ವಯದಲ್ಲಿ' ಹೇಗೆ 'ಶ್ರೀ' ಎಂಬ ಪದವು ಆರಂಭದಲ್ಲಿರುವುದೋ ಹಾಗೆಯೇ ಇದರಲ್ಲಿಯೂ ಶ್ರೀದೇವಿಯ ಸ್ತೋತ್ರವು ಮೊದಲು ಪ್ರಾರಂಭವಾಗಿರುತ್ತದೆ. ದ್ವಯದ ಮಂತ್ರರತ್ನದ ಮತ್ತು ವ್ಯಾಸದ ಸಂಪೂರ್ಣವಾದ ಅರ್ಥವನ್ನು ಈ ಸ್ತೋತ್ರವು ಪ್ರತಿಪಾದಿಸುತ್ತದೆ.

ಶ್ರೀದೇವಿಯು ಈ ಜಗತ್ತಿಗೆ ಅಧೀಶ್ವರಿ -- ಎಂದು ಹೇಳಲು 'ಅಸ್ಯೇಶಾನಾ ಜಗತೋ ವಿಷ್ಣುಪತ್ನೀ' -- ಅಂದರೆ ವಿಷ್ಣುಪತಿಯಾದ ಶ್ರೀದೇವಿಯು ಈ ಜಗತ್ತಿಗೆ ಅಧೀ

# ಶ್ರೀವೇಂಕಟೇಶ್ವರ ಸುಪ್ರಭಾತ



ಶ್ವರಿ ಎಂದು **ತಿಳಿಸುವ ಶ್ರುತಿ**ಯು ಪ್ರಮಾಣವಾಗಿರುವುದು. **ಶ್ರುತ್ಯನುಸಾರಿಯಾದ** ಪುರಾಣವೂ -- **'ತ್ವಂ ಮಾತಾ ಸರ್ವಲೋಕಾನಾಂ ದೇವ ದೇವೋ ಹರಿಃ ಪಿತಾ'** -- ಸಮಸ್ತ ಲೋಕಗಳಿಗೂ ಶ್ರೀದೇವಿಯು ಮಾತೆ ಎಂದೂ, ಶ್ರೀಹರಿಯು ಪಿತನೆಂದೂ ತಿಳಿಸಿ, ಜಗದೀಶ್ವರಿಯೆಂಬುದನ್ನು ಸಮರ್ಥಿಸುತ್ತದೆ. ಇದೇ ಅಭಿಪ್ರಾಯವನ್ನು ಲೌಕಿಕ ವೈದಿಕ ನಿದರ್ಶನಗಳಿಂದ ವ್ಯಕ್ತಪಡಿಸುತ್ತಾ, ಅಭಿಯುಕ್ತರಾದ ಶ್ರೀ ಶ್ರೀವತ್ಸಚಿಹ್ನ ಮಿಶ್ರರು (ಕೂರನಾಥ) ತಮ್ಮ ಶ್ರೀಸ್ತುತಿಯ ಮೊದಲನೆಯ ಪದ್ಯದಲ್ಲಿ ಈ ರೀತಿ ತಿಳಿಸಿದ್ದಾರೆ-

ಸ್ವಸ್ತಿ ಶ್ರೀರ್ದಿಶತಾದಶೇಷ ಜಗತಾಂ ಸರ್ಗೋಪಸರ್ಗಸ್ಥಿತೀಃ
ಸ್ವರ್ಗಂ ದುರ್ಗತಿ ಮಾಪವರ್ಗಿಕ ಪದಂ ಸರ್ವಂ ಚ ಕುರ್ವನ್ ಹರಿಃ
**ಯಸ್ಯಾ ವೀಕ್ಷ್ಯ ಮುಖಂ ತದಿಂಗಿತಪರಾಧೀನೋ ವಿಧತ್ತೇಽಖಿಲಂ**
ಕ್ರೀಡೇಯಂ ಖಲು ನಾನ್ಯಥಾಽಸ್ಯ ರಸದಾ ಸ್ಯಾದೈಕ ರಸ್ಯಾತ್ತಯಾ

ಎಂದರೆ, ಸಮಸ್ತ ಜಗತ್ತಿನ ಸೃಷ್ಟಿಸ್ಥಿತಿಲಯಗಳನ್ನು ನಡೆಸುವ ಪರಮಾತ್ಮನ ಲೀಲೆಯು ರಸವತ್ತಾದುದು; ಮಾತ್ರವೇ ಅಲ್ಲದೆ ಅದ್ಭುತವೂ ಆದುದು. ಇಂತಹ ರಸವತ್ತಾದ ಲೀಲೆಯು ರಸಜ್ಞ ರಾದವರಿಂದಲೇ ಸಾಧ್ಯ. ಆ ರಸಜ್ಞನು ಪರಮಾತ್ಮನಾದ ಶ್ರೀಮನ್ನಾರಾಯಣನಲ್ಲದೆ ಮತ್ತೆ ಯಾರೂ ಅಲ್ಲ. 'ರಸೋ ವೈ ಸಃ', 'ರಸಂ ಹ್ಯೇವಾಯಂ ಲಬ್ಧ್ವಾನಂದೀ ಭವತಿ' (ಧ್ಯಾನಿಸಲು -- ಆನಂದಿಸಲು ಯೋಗ್ಯವಾದ ಪರಮಾತ್ಮನನ್ನು ಅನುಸಂಧಾನ ಮಾಡಿ ಜೀವನು ಶಾಶ್ವತವಾದ ಆನಂದವುಳ್ಳವನಾಗುವನು) ಎಂಬ ಶ್ರುತಿಯು ಇದನ್ನು ವ್ಯಕ್ತಪಡಿಸುತ್ತದೆ. ಅಂತಹ ರಸಜ್ಞನಾದ ಶ್ರೀಮನ್ನಾರಾಯಣನೂ ಸಹ ಶ್ರೀದೇವಿಯ ಇಂಗಿತವನ್ನರಿತು ತನ್ನ ಲೀಲೆಗಳನ್ನು ಮುಂದುವರಿಸುವನು, ಅವರಿಬ್ಬರೂ ಹಾಗೆ ಏಕರಸರಾಗಿಲ್ಲದಿದ್ದರೆ ಅವನ ಲೀಲೆಯು ರಸವತ್ತಾಗಿ ಆಗುತ್ತಿರಲಿಲ್ಲ. ಆದುದರಿಂದಲೇ

ಶ್ರೀದೇವಿಯು ಜಗತ್ತಿನ ಅಧೀಶ್ವರಿ; ಪುರುಷಕಾರ ಸ್ವರೂಪಳು. ಶತ್ರುವಿನಲ್ಲಿಯೂ ಆಕೆಯ ಕರುಣೆಯು ಅಪಾರವಾದುದು, ಈ ವಿಚಾರವನ್ನು ನಾವು ಜಗನ್ಮಾತೆಯಾದ ಸೀತಾದೇವಿಯ ಚರಿತ್ರೆಯಲ್ಲಿ ಕಾಕಾಸುರ ಘಟನೆಯಲ್ಲಿಯೂ -- ಆತ್ಮಾಪಹಾರಿಯಾದ ರಾವಣನ ವಿಷಯದಲ್ಲಿಯೂ ವಿಶದವಾಗಿ ಕಾಣಬಹುದು. 'ತತ್‌ಕ್ಷಾಂತಿ ಸಂವರ್ಧಿನೀಮ್' -- ಎಂದು ಈ ಪದ್ಯದಲ್ಲಿ ಬಂದಿರುವ ಪದವು ಇದೇ ಅಭಿಪ್ರಾಯವನ್ನು ಪ್ರಕಾಶಗೊಳಿಸುತ್ತದೆ.

ಹೀಗೆ ಜಗನ್ಮಾತೆಯೂ ಪುರುಷಕಾರಸ್ವರೂಪಳೂ ಆದ ಶ್ರೀದೇವಿಯನ್ನು ವಂದಿಸಿ, ಮುಂದಿನ ಪದ್ಯದಿಂದ ಶ್ರೀವೇಂಕಟೇಶನ ಚರಣಾರವಿಂದಗಳನ್ನು ಶರಣವನ್ನಾಗಿ ಆಶ್ರಯಿಸಿ ಪ್ರಪನ್ನನು ಈ ರೀತಿ ಪ್ರಾರ್ಥಿಸುತ್ತಾನೆ--

ಶ್ರೀಮನ್ ಕೃಪಾಜಲನಿಧೇ ಕೃತಸರ್ವಲೋಕ
ಸರ್ವಜ್ಞ ಶಕ್ತ ನತವತ್ಸಲ ಸರ್ವಶೇಷಿನ್,
ಸ್ವಾಮಿನ್ ಸುಶೀಲ ಸುಲಭಾಶ್ರಿತ ಪಾರಿಜಾತ
ಶ್ರೀವೇಂಕಟೇಶ ಚರಣೌ ಶರಣಂ ಪ್ರಪದ್ಯೇ.

ಶ್ರೀ ದೇವಿಯ ನಿತ್ಯಯೋಗವುಳ್ಳವನೂ, ಕೃಪಾಸಮುದ್ರನೂ, ಸರ್ವಲೋಕಗಳ ನಿಯಾಮಕನೂ, ಸರ್ವಜ್ಞನೂ, ಸರ್ವಶಕ್ತನೂ ಆಶ್ರಿತವತ್ಸಲನೂ, ಸರ್ವಶೇಷಿ (ಪ್ರಭು) ಯೂ ಸುಶೀಲನೂ, ಸುಲಭನೂ, ಆಶ್ರಿತ ಪಾರಿಜಾತನೂ ಆದ ಶ್ರೀ ವೇಂಕಟೇಶ! ನಿನ್ನ ಪಾದಗಳನ್ನು ರಕ್ಷಕನನ್ನಾಗಿ ಆಶ್ರಯಿಸಿದ್ದೇನೆ.

ಸಾಮಾನ್ಯವಾಗಿ, ನಾವು ದುರ್ಬಲರಾಗಿ ಇತರರಿಂದ ರಕ್ಷಣೆಯನ್ನು ಪಡೆಯಬೇಕಾದರೆ ರಕ್ಷಕನು ಲೋಕಸ್ಥಿತಿಯಲ್ಲಿ ಬಲ್ಲವನಾಗಿರಬೇಕು; ಹೊಸದೊಂದು ಲೋಕವನ್ನೇ ನಿರ್ಮಿಸಲು ಸಮರ್ಥನಾಗಿರ ಬೇಕು; ಪ್ರೇಮ ಮಾತ್ರ ಇದ್ದರೆ ಸಾಲದು -- ಪ್ರಭಾವವಿರಬೇಕು; ಗುಣಾಕರನಾಗಿರಬೇಕು; ಪ್ರಭುತ್ವವಿದ್ದರೂ ಅದಕ್ಕೆ ಸರಿಯಾದ ಸೌಲಭ್ಯವಿರಬೇಕು; ಎಲ್ಲಕ್ಕಿಂತಲೂ ಹೆಚ್ಚಿನದಾಗಿ ಅವ್ಯಾಜವಾದ ಕರುಣೆಯಿರಬೇಕು -- ಈ ಗುಣಗಳು ಶರಣಾಗತ ಪರಿಪಾಲಕನ ಸ್ವಭಾವಿಕವಾದ ಧರ್ಮಗಳು. ಹೀಗಿರುವಲ್ಲಿ ಮೇಲೆ ತಿಳಿಸಿರುವ ಗುಣಗಳೆಲ್ಲವನ್ನೂ ಪರಮಾತ್ಮನೊಬ್ಬನಲ್ಲಿ ಅಲ್ಲದೆ ಮತ್ತೆಲ್ಲಿಯೂ ನಾವು ಕಾಣಲಾರೆವು. ಪರಮಾತ್ಮನು ಕೃಪಾಸಮುದ್ರನು; ಆತನ ಅಮೃತಶೀತಲವಾದ ಅಪಾಂಗವು ಯಾವ ಚೇತನನ ಕಡೆಗೆ ಸ್ವಲ್ಪ ಮಟ್ಟಿಗಾದರೂ ಪ್ರಸರಿಸುವುದೋ ಆತನು ಮುಕ್ತ; ನಿತ್ಯಸುಖಿ. ಪರಮಾತ್ಮನು ತನ್ನ ಲೀಲೆಗಾಗಿ ಲೋಕಗಳನ್ನು ಸೃಷ್ಟಿಸಿದನು. ಈಗ ನಾವು ಇರುತ್ತಿರುವ, ಅನುಭವಿಸುತ್ತಿರುವ ಅತ್ಯದ್ಭುತವೂ ವಿಚಿತ್ರವೂ ಆದ ಪ್ರಪಂಚವು ಅವನ ಒಂದು ಇಚ್ಛೆಯು ಮಾತ್ರ. ಈಗ ಕಾಣುತ್ತಿರುವಂತಹ ಪ್ರಪಂಚಕ್ಕೆ ಮೊದಲು ಪರಮಾತ್ಮನೊಬ್ಬನನ್ನು ಬಿಟ್ಟರೆ ಏನೂ ಇರಲಿಲ್ಲ. 'ಏಕೋಹ ವೈ ನಾರಾಯಣ ಆಸೀತ್' -- ಅಂದರೆ, ಯಾವನೊಬ್ಬನನ್ನು ನಿತ್ಯವಾದ -- ನಾಶರಹಿತವಾದ ವಸ್ತುಗಳ ತಿರುಳೆಂದೂ, ಆಶ್ರಯವೆಂದೂ ಬಲ್ಲವರು ಹೇಳುವರೋ ಆ ಪರಮಾತ್ಮನೊಬ್ಬನೇ ಇದ್ದನು; ಬ್ರಹ್ಮಾದಿಗಳು ಕೂಡ ಇರಲಿಲ್ಲವೆಂದು ಶ್ರುತಿಯು ಘೋಷಿಸುತ್ತದೆ. ಅದೇ ಶ್ರುತಿಯು ಮುಂದುವರಿದು -- 'ಬಹುಸ್ಯಾಂ ಪ್ರಜಾಯೇಯೇತಿ' --ಅಂದರೆ, ಏಕವಾಗಿದ್ದದ್ದು ಅನೇಕವಾಗಿಯೂ, ಏಕರೂಪವಾಗಿದ್ದದ್ದು ಅನೇಕ ರೂಪವಾಗಿಯೂ, ಏಕನಾಮವುಳ್ಳದ್ದು ಅನಂತ ನಾಮವುಳ್ಳದ್ದಾಗಿಯೂ ಆಗುವ ಇಷ್ಟವನ್ನು ಸೂಚಿಸುತ್ತದೆ. ಹೀಗೆ ಪರಮಾತ್ಮನು 'ಕೃತಸರ್ವಲೋಕನು'. ತನ್ನ ಲೀಲೆಗಾಗಿ ತನ್ನ ಇಚ್ಛಾ ಮಾತ್ರದಿಂದಲೇ ತನಗೆ ಬೇಕಾದಂತೆ ಲೋಕಗಳನ್ನು ಸೃಜಿಸಿದರಿಂದಲೇ ಆತನು 'ಸರ್ವಜ್ಞ' -- ಎಲ್ಲವನು ಬಲ್ಲವನು. ಅದರಿಂದಲೇ -- 'ಯಸ್ಸರ್ವಜ್ಞಸ್ಸ ಸರ್ವವಿತ್' --ಎಂದು ಶ್ರುತಿಯು ಆತನ ಸರ್ವಜ್ಞತೆಯನ್ನು ವಿಶದೀಕರಿಸುತ್ತದೆ. ಅಂತೆಯೇ 'ತೇನ ವಿನಾ ತೃಣಮಪಿ ನ ಚಲತಿ' --ಅವನ ಇಚ್ಛೆಯಿಲ್ಲದೆ ಒಂದು ಹುಲ್ಲುಕಡ್ಡಿಯೂ ಚಲಿಸಲಾರದು. ಅಷ್ಟೇ ಏಕೆ? 'ಭೀಷೋಽಸ್ಮಾದ್ವಾತಃ ಪವತೇ ಭೀಷೋದೇತಿ ಸೂರ್ಯಃ' -- ಆತನ ಅಂಕೆಗೆ ಒಳಪಟ್ಟು ವಾಯುದೇವನು ಚಲಿಸುತ್ತಾನೆ. ಆತನಿಗೆ ಹೆದರಿ ಸೂರ್ಯ ಭಗವಾನನೂ ಉದಿಸುತ್ತಾನೆ. ಅಗ್ನಿ ಇಂದ್ರರೇ ಮೊದಲಾದವರೂ ಆತನ ಆಜ್ಞೆಯನ್ನು ಮೀರಲಾರದೆ ತಮ್ಮ ತಮ್ಮ ಕರ್ತವ್ಯವನ್ನು ನಿರ್ವಹಿಸುತ್ತಿದ್ದಾರೆ -- ಎಂದ ಮೇಲೆ ಆತನು 'ಸರ್ವಶಕ್ತ'ನೆಂಬುದನ್ನು ನಾವು ಸ್ಪಷ್ಟವಾಗಿ ತಿಳಿಯಬಹುದು. 'ನತವತ್ಸಲ ಸರ್ವಶೇಷಿನ್ ಸ್ವಾಮಿನ್' -- ಎಂಬ ಪದಗಳಿಂದ ಜೀವರಿಗೂ, ಪರಮಾತ್ಮನಿಗೂ ಇರುವ ನವವಿಧ ಸಂಬಂಧಗಳಲ್ಲಿ ಒಂದಾದ 'ಶೇಷ ಶೇಷೀಭಾವ' ವು ವ್ಯಕ್ತವಾಗುವುದು. ಸಮಸ್ತ ಚೇತನರೂ 'ಶೇಷರು' --ಅಂದರೆ ಪರಮಾತ್ಮ ದಾಸಭೂಷರು; ಪರಮಾತ್ಮನು 'ಶೇಷಿ' ಅಂದರೆ ಪ್ರಭು, ಸ್ವಾಮಿ, ಇಂತಹ ಶೇಷ ಶೇಷೀಭಾವವನ್ನು ವರ್ಣಿಸುತ್ತಾ ಯಾಮುನಾಚಾರ್ಯರು ಸ್ತೋತ್ರ ರತ್ನದಲ್ಲಿ ಪರಮಾತ್ಮನ ಶೇಷಭೂತನಾದ ಆದಿಶೇಷನನ್ನು ಈ ರೀತಿ ಹೊಗಳಿದ್ದಾರೆ.

ನಿವಾಸಶಯ್ಯಾಸನಪಾದುಕಾಂಶುಕೋ ಪಧಾನವರ್ಷಾ-ತಪವಾರಣಾದಿಭಿಃ
ಶರೀರಭೇದೈಸ್ತವ ಶೇಷತಾಂ ಗತ್ಯೈ--ರ್ಯಥೋಚಿತಂ ಶೇಷ ಇತೀರ್ಯತೇ ಜನೈಃ

--ಎಂದರೆ ಆದಿಶೇಷನು ಎಲ್ಲರೀತಿಯಿಂದಲೂ 'ಶೇಷ' (ದಾಸ)ನಾಗಿ ಇದ್ದಾನೆ. ಕ್ಷಿರಾಬ್ಧಿಯಲ್ಲಿ ಶ್ರೀಮನ್ನಾರಾಯಣನು ಶೇಷಶಾಯಿಯಾಗಿರುವ ನೆನ್ನುವುದರಿಂದ ಶೇಷನು ಪರಮಾತ್ಮನಿಗೆ ಅವಾಸಸ್ಥಾನನೂ, ಶಯನವು ಆಗಿದ್ದಾನೆ. 'ಇತರ ಭುಜಂನಾಗಭೋಗೇ ನಿಧಾಯ' -- ಇನ್ನೊಂದು ಕೈಯನ್ನು ಶೇಷನ ಶರೀರದ ಮೇಲೆ ಇಟ್ಟುಕೊಂಡಿರುವ ವರ್ಣನೆಯಿಂದ ಶೇಷನು ಶೇಷಿಯಾದ ಪರಮಾತ್ಮನಿಗೆ ಆಸನವಾಗಿರುವನೆಂದೂ, ಆತನ ಶರೀರದ ಮೇಲೆ ಪಾದಪದ್ಮಗಳನ್ನಿಟ್ಟಿರುವುದರಿಂದ ಪಾದುಕೆಯಾಗಿರುವನೆಂದೂ, ಶೇಷಶಯನನೆನ್ನುವುದರಿಂದಲೇ ಯೋಗನಿದ್ರೆಯಲ್ಲಿರುವ ಪರಮಾತ್ಮನಿಗೆ ಕೋಮಲವಾದ, ಸಂಕೋಚ ವಿಕಾಸ ಸ್ವಭಾವವುಳ್ಳ ತಲೆದಿಂಬಾಗಿರುವನೆಂದೂ, ವಿಸ್ತೃತವಾದ ಫಣಾಮಂಡಲದ ಸಹಾಯದಿಂದ ಮಳೆ, ಬಿಸಿಲುಗಳನ್ನು ಮರೆಮಾಡುವುದರಿಂದ ಛತ್ರಿಯಾಗಿರುವನೆಂದೂ -- ಆದುದರಿಂದಲೇ ಆತನಿಗಿರುವ 'ಶೇಷ' ನೆಂಬ ನಾಮಧೇಯವು ಅನ್ವರ್ಥವಾಗಿದೆ ಎಂದೂ, ಆಚಾರ್ಯರು ಬಹುಮನೋಹರವಾಗಿ ನಿರೂಪಿಸಿದ್ದಾರೆ. ಆದುದರಿಂದ ಪರಮಾತ್ಮನು 'ಸರ್ವಶೇಷಿ'. ಹೀಗೆ ಪರಮ ಪ್ರಭುತ್ವವುಳ್ಳವನಾದರೂ 'ನತವತ್ಸಲ' ಮತ್ತು -- 'ಆಶ್ರಿತ ಪಾರಿಜಾತ'. ಈ ಗುಣಗಳನ್ನು

ಪುರಾಣೇತಿಹಾಸಗಳಲ್ಲಿ ಪ್ರಸಿದ್ಧವಾಗಿ ಕಾಣಬಹುದು. ಪರಮಾತ್ಮನ ಅನಂತ ವಾತ್ಸಲ್ಯವನ್ನು ಪಡೆಯಬೇಕಾದರೆ ಪರಿಶುದ್ಧವಾದ ಪ್ರೇಮವಿರಬೇಕು; ಪರಿಪಕ್ವವಾದ ಭಕ್ತಿಯಿರಬೇಕು. ಕೇವಲ ಐದುವರ್ಷ ವಯಸ್ಸಿನ ಬಾಲಕ; ಪರಮಾತ್ಮನನ್ನು ನೋಡುವ ಆತನ ಛಲ! ಎಂತಹ ಸರಳವಾದ ಭಾವನೆಯುಳ್ಳ ಪುಟ್ಟ ಬಾಲಕ! ತಾಯಿಯ ಮಡಿಲಲ್ಲಿ ಆಟವಾಡುವಂತಹ ಪುಟ್ಟಬಾಲಕನಾದ ಧ್ರುವನ ಆ ಸಾಹಸ, ಆ ಛಲ, ಆ ಧೈರ್ಯ, ಎಲ್ಲಕ್ಕಿಂತಲೂ ಹೆಚ್ಚಿನದಾದ ಆ ವಿಶುದ್ಧವಾದ ಪ್ರೇಮ -- ಇವುಗಳಿಗೆ ಪರಮಾತ್ಮನು ಪ್ರಸನ್ನನಾದನೆಂದರೆ ಆಶ್ಚರ್ಯವೇನು? ಬಾಲಕನೆಂದು ಪರಮಾತ್ಮನು ಆತನನ್ನು ತಿರಸ್ಕರಿಸಲಿಲ್ಲ. ನತನಾದ ಬಾಲಕನಲ್ಲಿ ವಾತ್ಸಲ್ಯವನ್ನು ತೋರಿಸಿದನು. ಶಂಖದಿಂದ ಮೃದುವಾಗಿ ಅವನ ಕೆನ್ನೆಯನ್ನು ಸವರಿಸಿದನು. 'ಆಶ್ರಿತಪಾರಿಜಾತ' ನಾಗಿ ಅವನಿಗೆ 'ಅಗಣಿತ ಶ್ರೇಯಃಪದ'ವನ್ನು ಕರುಣಿಸಿದನು. ಇವನನ್ನು ಕರುಣಿಸಿದಂತೆಯೇ ಪ್ರಹ್ಲಾದ ಕುಮಾರನನ್ನೂ ವಾತ್ಸಲ್ಯದಿಂದ ರಕ್ಷಿಸಿದನು. ಪ್ರಹ್ಲಾದನಿಗೆ ವಾತ್ಸಲ್ಯವನ್ನು ತೋರಿಸುವ ನೆಪದಿಂದ ದೈತ್ಯವರ್ಗದ ದಂಭವನ್ನು ಮರಿದು 'ಆಶ್ರಿತ ಸುಲಭನಾಗಿ' -- 'ಸ್ತಂಭಶಿಶು'ವಾಗಿ ತನ್ನ ಸರ್ವಾಂತರ್ಯಾಮಿತ್ವವನ್ನೂ ಪರಮ ಕರುಣಾಳುತ್ವವನ್ನೂ ವ್ಯಕ್ತಪಡಿಸಿದನು; ತನ್ನ ಶತ್ರುವಾದ ರಾಕ್ಷಸನ ಮಗನೆಂದು ಉಪೇಕ್ಷಿಸಲಿಲ್ಲ. ಹಾಗೆಯೇ ವಾನರನಾದ ಸುಗ್ರೀವನಿಗೂ, ಪರಮದ್ವೇಷಿಯಾದ ರಾವಣನ ಸಹೋದರನಾದ ವಿಭೀಷಣನಿಗೂ ಅಭಯವನ್ನಿತ್ತು ಸಂರಕ್ಷಿಸಿದನು. ಕಪಿ ಎಂದಾಗಲಿ, ರಾಕ್ಷಸನೆಂದಾಗಲಿ ತನ್ನ ಧರ್ಮದಿಂದ ವಿಮುಖನಾಗಲಿಲ್ಲ. ಗಜಶ್ರೇಷ್ಠವು ನೀರನ್ನು ಕುಡಿಯಲು ಹೋಗಿ ಮೊಸಳೆಯ ಸೆಳೆತಕ್ಕೆ ಸಿಕ್ಕಿಕೊಂಡಿತು. ಸರಿ; ಬಿಡಿಸಿಕೊಳ್ಳುವ ಪ್ರಯತ್ನಮಾಡಿದಷ್ಟೂ ಮೊಸಳೆಯೂ ಜೋರಾಗಿ ಎಳೆಯಲಾರಂಭಿಸಿತು. ಆನೆ ತನ್ನ ಪರಿವಾರವನ್ನೆಲ್ಲ ನೋಡಿ ಮೊರೆಯಿಟ್ಟಿತು, ನೀರಿನಲ್ಲಿ ಮುಳುಗಿ ಹೋಗುತ್ತಿರುವವನು ಒಂದು ಹುಲ್ಲುಕಡ್ಡಿ ಸಿಕ್ಕಿದರೆ ಅದನ್ನೇ ಹಿಡಿದುಕೊಂಡು ಮೇಲಕ್ಕೆ ಬರಲು ಪ್ರಯತ್ನಮಾಡುವಂತೆ ಕೆಲಸಕ್ಕೆ ಬಾರದ ಪ್ರಯತ್ನಗಳನ್ನೆಲ್ಲ ಮಾಡಿತು. ಯಾವುದೂ ಫಲಿಸದಿದ್ದಾಗ ಪೂರ್ವ ಜನ್ಮದ ಸುಕೃತ ವಿಶೇಷದಿಂದ ಶ್ರೀಮನ್ನಾರಾಯಣನೊಬ್ಬನೇ ಗತಿ, ಬೇರೆ ಯಾರೂ ಇಲ್ಲವೆಂದು ಗೋಚರಿಸಿದಾಗ ಸೊಂಡಿಲಿನಿಂದ ಒಂದು ಕೆಂದಾವರೆಯನ್ನು ಕಿತ್ತು ಪರಮಾತ್ಮನಿಗೆ ಅರ್ಪಿಸುತ್ತಾ -- 'ನಾರಾಯಣಾಖಿಲಗುರೋ ಭಗವನ್ ನಮಸ್ತೇ' ಎಂದು ಮೊರೆಯಿಟ್ಟಿತು. ಕೇಳ ಬೇಕೆ! ಕೂಡಲೆ ಶಂಖಚಕ್ರಧಾರಿಯೂ, ಗರುಡಾರೂಢನೂ ಆದ ಶ್ರೀಮನ್ನಾರಾಯಣನು ಓಡಿ ಬಂದನು; ಪೀಡಿತನ ಪೀಡೆಯನ್ನು ತೊಲಗಿಸಿದನು; ಆಶ್ರಿತ ಪಾರಿಜಾತನಾದನು; ಆನೆಯೆಂದು ಯಾವುದೋ ಒಂದು ಜಂತುವೆಂದು ಉದಾಸೀನಮಾಡಲಿಲ್ಲ. ಮತ್ತೊಂದು ನಿದರ್ಶನವೇನೆಂದರೆ ಅತ್ಯದ್ಭುತವೂ, ಅವಿಸ್ಮರಣೀಯವೂ ಆದ ಪಾಂಚಾಲಿಯ ಪರಾಭವದ ಘಟನೆ. ಗುರುಹಿರಿಯರಿಂದಲೂ, ರಾಜಾಧಿ ರಾಜರಿಂದಲೂ, ನೀತಿಕೋವಿದರಿಂದಲೂ, ಶಾಸ್ತ್ರಪಾರಂಗತರಿಂದಲೂ ತುಂಬಿರುವ ಕೌರವರ ಆಸ್ಥಾನದಲ್ಲಿ ಶಕುನಿಯ ಕುತಂತ್ರದಿಂದ ಜೂಜಿನಲ್ಲಿ ಪಾಂಡವರು ಸೋತು ಕುಳಿತಿದ್ದಾರೆ. ಧರ್ಮಕ್ಕೆ ಅಧೀನನಾಗಿರುವ ಯುಧಿಷ್ಠಿರನ ಮಾತಿಗೆ ಕಟ್ಟುಬಿದ್ದು ಭೀಮನೇ ಮೊದಲಾದ ಸಹೋದರರು ಮಂತ್ರಮುಗ್ಧವಾದ ಸರ್ಪದಂತೆ ಕೋಪವನ್ನು ನುಂಗಿಕೊಳ್ಳುತ್ತಿದ್ದಾರೆ. ಇಂತಹ ಸಮಯದಲ್ಲಿ ರಜಸ್ವಲೆಯೂ, ಏಕವಸ್ತ್ರಧಾರಿಯೂ ಆದ ಪಾಂಚಾಲಿಯನ್ನು ತುಂಬಿದ ಸಭೆಗೆ ಎಳೆದು ತಂದುದೇ ಅಲ್ಲದೆ ವಿವಸ್ತ್ರಳನ್ನಾಗಿ ಮಾಡುವ ಏರ್ಪಾಡು ಭರದಿಂದ ಸಾಗಿದೆ, ದುಷ್ಟಕೌರವನ ಅವಿವೇಕದ ಪರಮಾವಧಿಯು ಇಷ್ಟು ಮುಂದುವರಿಯುತ್ತಿದ್ದರೂ ಉಭಯಕುಲ ಪಿತಾಮಹನಾದ ಭೀಷ್ಮನಿಗೂ ಅದನ್ನು ತಡೆಯಲಾಗಲಿಲ್ಲ. ಆಚಾರ್ಯರಾದ ದ್ರೋಣರಿಗೂ ಇದನ್ನು ನಿರೋಧಿಸುವ ಧೈರ್ಯವುಂಟಾಗಲಿಲ್ಲ. ರಾಜಾಧಿರಾಜರಾಗಲಿ, ನೀತಿ ಬೋಧಕರಾಗಲಿ ಈ ಅವಿನಯವನ್ನು ಖಂಡಿಸುವ ಪ್ರಯತ್ನವನ್ನೇ ಮಾಡಲಿಲ್ಲ. ಬಂಧು ಬಾಂಧವರಲ್ಲಿ, ಕಡೆಗೆ ವೀರಾಧಿ ವೀರರಾದ ಐವರು ಪತಿಗಳೂ ಸಹ ಅಸಹನೀಯವಾದ ಈ ದೃಶ್ಯವನ್ನು ಕಂಡು ಚಿತ್ರದಲ್ಲಿ ಬರೆದವರಂತೆ ಕುಳಿತಿದ್ದರೆಂದರೆ, ಪಾಂಚಾಲಿಯು ಇನ್ನು ಯಾರಲ್ಲಿ ಮೊರೆಯಿಡಬೇಕು? ಈ ಜಗತ್ತಿನಲ್ಲಿ ತನ್ನವರೆಂದೆನಿಸಿಕೊಳ್ಳುವರು ಯಾರು? ಅಂತಹ ಸಮಯದಲ್ಲಿ ನೆರೆದ ಸಭೆಯಲ್ಲಿ ತನಗೆ ಸಹಾಯಕರು ಯಾರೂ ಇಲ್ಲದಿರುವುದನ್ನು ತಿಳಿದು ಅನನ್ಯ ಶರಣಳಾಗಿ -- 'ಮಹತ್ಯಾಪದಿ ಸಂಪ್ರಾಪ್ತೇ ಸ್ಮರ್ತವ್ಯೋ ಭಗವಾನ್ ಹರಿಃ' ಎಂದು ನಿಶ್ಚಯಿಸಿ, ಆರ್ತಳಾಗಿ

ಹಾ! ಕೃಷ್ಣ ದ್ವಾರಕಾವಾಸಿನ್ ಕ್ವಾಸಿ ಯಾದವನಂದನ
ಪ್ರಪನ್ನಾಂ ಪಾಹಿ ಗೋವಿಂದ ಕುರುಮಧ್ಯೇವಸೀದತೀಮ್
ಶಂಖಚಕ್ರಗದಾಪಾಣೇ ದ್ವಾರಕಾನಿಲಯಾಚ್ಯುತ
ಗೋವಿಂದ ಪುಂಡರೀಕಾಕ್ಷ ರಕ್ಷಮಾಂ ಶರಣಾಗತಾಮ್

--ಎಂದು ಮೊರೆಯಿಟ್ಟಳು. ಸ್ವರೂಪವನ್ನೂ ತೊರೆದು ಆತ್ರಳಾಗಿ ಮೊರೆಯಿಟ್ಟ ದ್ರೌಪದಿಯ ಆರ್ತಧ್ವನಿಯನ್ನು ಪರಮ ಕಾರಣಿಕನಾದ, ಆರ್ತತ್ರಾಣ ಪರಾಯಣನಾದ ಶ್ರೀಕೃಷ್ಣನು ಆಲಿಸಿದನು. ಪ್ರಪನ್ನಳ ಆರ್ತಿ (ಪೀಡೆ) ಯು ತೊಲಗಿತು; ಅಕ್ಷಯ ವಸ್ತ್ರವು ದೊರಕಿತು; ಸಂಕಟದಿಂದ ಪಾರಾದಳು.

ಚತುರ್ವಿಧಾ ಭಜಂತೇ ಮಾಂ .... .... ....
ಆರ್ತೋ ಜಿಜ್ಞಾಸುರರ್ಥಾರ್ಥೀ ಜ್ಞಾನೀ ಚ .... .... ....

--ಎಂದು ಗೀತೆಯಲ್ಲಿ ಹೇಳಿರುವಂತೆ ಆರ್ತಳ ಆಶ್ರಯಕ್ಕೆ ಪಾರಿಜಾತನಾಗಿ ಸಂಕಟವನ್ನು ಪರಿಹರಿಸಿದನು. ಇವಳು ರಜಸ್ವಲೆ; ಅಶುಚಿ; ಇವಳ ಪ್ರಪತ್ತಿಗೆ ಇದು ಸಮಯವಲ್ಲವೆಂದು ಪರಮಾತ್ಮನು ಆಕೆಯನ್ನು ಕಡೆಗಣಿಸಲಿಲ್ಲ; ತುಚ್ಛವಾಗಿ ಕಾಣಲಿಲ್ಲ; ಆದರೆ ಆಕೆಯ ನಿಶ್ಚಲವಾದ ಭಕ್ತಿಗೂ, ಪ್ರಪತ್ತಿಗೂ ಮೆಚ್ಚಿ ಆಕೆಯನ್ನು ಅನುಗ್ರಹಿಸಿದನು. ಔದಾರ್ಯದ ಪರಾಕಾಷ್ಠೆಯನ್ನು ಪ್ರಕಟಿಸಿದನು. ಇದು ಪ್ರಪತ್ತಿ ಮಾರ್ಗದ ಹಿರಿಮೆ. ಕಡೆಯದಾಗಿ ಇನ್ನೊಂದು ಸಾಕ್ಷಿಯನ್ನು ಕೊಡಬಹುದು. ಆ ಸಾಕ್ಷಿ ಎಂದರೆ, ಅಹಲ್ಯೆ. ಭಾರತೀಯ ಪ್ರಾಚೀನ ಸಂಸ್ಕೃತಿಯಂತೆ ಯಾವಳು ಇಂದಿಗೂ ಪ್ರಾತಃ ಸ್ಮರಣೀಯರಾದವರಲ್ಲಿ ಒಬ್ಬಳಾಗಿರುವಳೋ, ಸ್ಮರಿಸಿದರೆ ಮಹಾಪಾತಕಗಳೂ ನಾಶವಾಗುವುವೆಂದು ಹೇಳಿಕೊಂಡಿರುವ ಪಂಚಕನ್ಯೆಯರಲ್ಲಿ ಯಾವಳು ಮೊದಲನೆಯವಳಾಗಿರುವಳೋ -- ಆಕೆಯು ಗೌತಮನ ದೃಷ್ಟಿಯಿಂದ ಪತಿತಳಾದಳು; ಆಗಿನ ಜನತೆಯ

ದೃಷ್ಟಿಯಿಂದಲೂ ಪತಿತಳಾದಳು; ಪರಿಣಾಮವಾಗಿ ಬಲಿಯನ ಶಿಲೆಯಂತೆ ಮೂಕವೇದನೆಯನ್ನು ಅನುಭವಿಸುವವಳಾದಳು. ಆದರೆ ಪರಮಕಾರಣಿಕನಾಗಿಯೂ, ಪಾಪವಿಮೋಚಕನಾಗಿಯೂ ಇರುವ ಶ್ರೀರಾಮಚಂದ್ರನು ಆಕೆಯ ದೀರ್ಘಕಾಲದ ಮೂಕವೇದನೆಯನ್ನು ಪರಿಹರಿಸಿದನು; ಆದ ಪಾಪವನ್ನು ಶೋಷಿಸಿದನು; ಆರ್ತತ್ರಾಣಪರಾಯಣನಾಗಿಯೂ ಅಘ ಶೋಷಕನಾಗಿಯೂ, ಆಶ್ರಿತಪಾರಿಜಾತನಾಗಿಯೂ ಆಕೆಯನ್ನು ಉದ್ಧರಿಸಿದುದು ಮಾತ್ರವೇ ಅಲ್ಲದೆ ಪರಮಸಾಧ್ವಿಯೆಂದು ಲೋಕಕ್ಕೆ ಅರುಹಿದನು. ಇದು ಪ್ರಪತ್ತಿ ಮಾರ್ಗದ ಶ್ರೇಷ್ಠತೆ. ಹೀಗೆ ಪರಮಭಕ್ತಿಯುತವಾದ ಪ್ರಪತ್ತಿ ಮಾರ್ಗಕ್ಕೆ ದೇಶ ಕಾಲಗಳ ಗಣನೆಯಿಲ್ಲ. ಹಿರಿಯ -- ಕಿರಿಯರೆಂಬ ತಾರತಮ್ಯವಿಲ್ಲ; ಮೇಲು ಕೀಳೆಂಬ ಜಾತಿವೈಷಮ್ಯವಿಲ್ಲ; ಮನುಷ್ಯರು -- ಪ್ರಾಣಿಗಳೆಂಬ ಅಸಮಾನತೆಯಿಲ್ಲ; ಸ್ತ್ರೀ -- ಪುರುಷರೆಂಬ ಭಿನ್ನತೆಯಿಲ್ಲ; ಶುಚಿ -- ಅಶುಚಿಯೆಂಬ ವ್ಯತ್ಯಾಸ ವಿಲ್ಲ; ಶತ್ರು -- ಮಿತ್ರರೆಂಬ ತಾತ್ಸಾರವಿಲ್ಲ. ಪ್ರಪತ್ತಿ ಮಾರ್ಗದಲ್ಲಿ ಎಲ್ಲರೂ ಸಮಾನರು. ಆದರೆ ನಿಶ್ಚಲವಾದ ಅನನ್ಯಗತಿಕವಾದ ಪರಿಶುದ್ಧವಾದ ಆಚಾರ್ಯರು ಪ್ರಪತ್ತಿ ಮಾರ್ಗವನ್ನು ಅನುಸರಿಸಿ -- "ಶ್ರೀ ವೇಂಕಟೇಶ ಚರಣೌ ಶರಣಂ ಪ್ರಪದ್ಯೇ" --ಎಂದರು.

ಈ ರೀತಿಯಾಗಿ ಶ್ರೀವೇಂಕಟೇಶನ ಚರಣಾರವಿಂದಗಳನ್ನು ರಕ್ಷಕವನ್ನಾಗಿ ಆಶ್ರಯಿಸಿ, ಅದರಲ್ಲಿಯೇ ನಿರ್ಭರರಾಗಿ ಮುಂದಿನ ಪದ್ಯದಲ್ಲಿ ಆಶ್ರಯವಾದ ಆ ಪಾದ ಪದ್ಮಗಳನ್ನು ಪರಿಪರಿಯಿಂದ ವರ್ಣಿಸುತ್ತಾರೆ.

ಆನೂಪುರಾರ್ಪಿತ ಸುಜಾತ ಸುಗಂಧ ಪುಷ್ಪ
ಸೌರಭ್ಯ ಸೌರಭಕರೌ ಸಮಸನ್ನಿವೇಶೌ,
ಸೌಮ್ಯೌ ಸದಾನುಭವನೇ ಪಿನವಾನುಭಾವ್ಯೌ
ಶ್ರೀವೇಂಕಟೇಶಚರಣೌ ಶರಣಂ ಪ್ರಪದ್ಯೇ.

ನೂಪುರದವರೆಗೆ ಅರ್ಪಿಸಲ್ಪಟ್ಟಿರುವ ಸುಗಂಧವೂ; ಸುಗಂಧಯುಕ್ತವೂ ಆದ ಹೂವಿನ ಸೌರಭ್ಯಕ್ಕ ಸೌರಭ (ಸುಗಂಧ) ವನ್ನುಂಟುಮಾಡುವ, ಒಂದೇ ಸಮನಾಗಿರುವ, ಕೋಮಲವಾಗಿರುವ, ಸರ್ವದಾ ಅನುಭವಿಸುತ್ತಿದ್ದರೂ ಹೊಸ ಹೊಸದಾಗಿಯೇ ಕಾಣುತ್ತಿರುವ ಶ್ರೀವೇಂಕಟೇಶನ ಚರಣಗಳನ್ನು ಶರಣು ಹೊಂದಿದ್ದೇನೆ.

ಶ್ರೀ ವೇಂಕಟೇಶನ ನಿತ್ಯ ಕೈಂಕರ್ಯಗಳಲ್ಲಿ ವಿಶ್ವರೂಪ ಸೇವೆಯೇ ಮೊದಲನೆಯದು. ಎರಡನೆಯದು -- "ತೋಮಾಲ ಸೇವೆ" -- ಅಂದರೆ, ಅರ್ಘ್ಯಪಾದ್ಯಾದಿಗಳಿಂದ ವಿಧಿವತ್ತಾಗಿ ಭಗವಂತನನ್ನು ಆರಾಧಿಸಿ, ಹೂವಿನ ಮಾಲೆಯಿಂದ ಅಲಂಕರಿಸುವುದು. ಹಾಗೆ ಅಲಂಕರಿಸುವಾಗ ಅತ್ಯಂತ ಸುಗಂಧ ಯುಕ್ತವಾಗಿಯೂ, ಅತ್ಯಂತ ಸುಖಸ್ಪರ್ಶವಾಗಿಯೂ ಇರುವ ಹೂವಿನ ಮಾಲೆಯನ್ನು ಪರಮಾತ್ಮನ ನೂಪುರ (ಕಾಲುಗೆಜ್ಜೆ) ದವರೆಗೆ ಅಲಂಕರಿಸುತ್ತಾರೆ. ಈ ಸಂದರ್ಭವನ್ನು ನೆನೆದು ಪರಮ ಭಕ್ತನಾದ ಕವಿಯೂ, 'ಅಂತಹ ಅತ್ಯಂತ ಸುರಭಿಯಾದ ಕುಸುಮಕ್ಕೂ ಸುಗಂಧವನ್ನುಂಟುಮಾಡುವ ಪಾದಾರವಿಂದಗಳು' ಎಂದು ವರ್ಣಿಸಿರುವುದು ಭಾವೋತ್ಕರ್ಷವನ್ನು ಸೂಚಿಸುತ್ತದೆ. ಆದುದರಿಂದಲೇ ಆ ಪಾದಗಳು ಸೌಮ್ಯವಾದವು, ಕುಸುಮಕೋಮಲವಾದವು. "ಕ್ಷಣೇ ಕ್ಷಣೇ ಯನ್ನವತಾಮುಪೈತಿ ತದೇವ ರೂಪಂ ರಮಣೀಯತಾಯಾಃ"

-- ಎಂದರೆ, ಪ್ರತಿಕ್ಷಣದಲ್ಲಿಯೂ ಯಾವುದೊಂದು ಪದಾರ್ಥವು ಹೊಸತನವನ್ನು ಹೊಂದಿರುತ್ತದೆಯೋ ಅದೇ ರಮಣೀಯತೆಯ ಲಕ್ಷಣವೆಂದು ಒಬ್ಬ ಕವಿಯು ತಿಳಿಸಿರುವಂತೆಯೂ, 'ಸದಾ ಪಶ್ಯಂತಿ ಸೂರಯಃ' -- ಎಂದು ಶ್ರುತಿಯಲ್ಲಿ ಪ್ರತಿಪಾದಿಸುವಂತೆಯೂ, ಶ್ರೀ ವೇಂಕಟೇಶನ ಚರಣಗಳು ಸರ್ವದಾ ದರ್ಶಿಸಿ ಅನುಭವಿಸಲ್ಪಡುತ್ತಿದ್ದರೂ 'ನವ ನವ'ವಾಗಿ ಇರುವಂಥವು. ಆದುದರಿಂದಲೇ ಅವು ರಮಣೀಯವಾದವು; ಆಶ್ರಯಿಸಲು ಯೋಗ್ಯವಾದವು.

ಸದ್ಯೋವಿಕಾಸಿ ಸಮುದಿತ್ವರ ಸಾಂದ್ರರಾಗ--
ಸೌರಭ್ಯನಿರ್ಭರ ಸರೋರುಹ ಸಾಮ್ಯವಾರ್ತಾಮ್,
ಸಮ್ಯಕ್ಷು ಸಾಹಸಪದೇಷು ವಿಲೇಖಯನ್ತೌ
ಶ್ರೀವೇಂಕಟೇಶಚರಣೌ ಶರಣಂ ಪ್ರಪದ್ಯೇ.

ಆಗ ತಾನೇ ವಿಕಾಸಗೊಂಡು ಸುವ್ಯಕ್ತವಾಗಿರುವ ಸಾಂದ್ರವಾದ ಅರುಣ ವರ್ಣದಿಂದಲೂ, ಸೌರಭ್ಯದಿಂದಲೂ ಕೂಡಿರುವ ಕಮಲಗಳ ಸಾದೃಶ್ಯವನ್ನು ಸೂಚಿಸುತ್ತಿರುವ ಶ್ರೀ ವೇಂಕಟೇಶನ ಚರಣಗಳನ್ನು ಶರಣುಹೊಂದಿದ್ದೇನೆ.

"ಸದ್ಯೋವಿಕಾಸಿ.... ಸಾಮ್ಯವಾರ್ತಾಮ್" -- ಎನ್ನುವುದರಿಂದ ಪರಮಾತ್ಮನ ಪಾದಪದ್ಮಗಳ ಸೌಂದರ್ಯಾತಿಶಯವು ವ್ಯಕ್ತವಾಗುತ್ತದೆ. ಕಮಲಗಳಿಗೆ ಪಾದಗಳನ್ನು ಉಪಮಾನವಾಗಿ ಹೇಳುವುದರಿಂದ ಪಾದಗಳು ಕಮಲಕ್ಕಿಂತಲೂ ಕೋಮಲವಾಗಿಯೂ 'ಪಾಣಿಪಾದತಲೌ ರಕ್ತೌ' -- ಎಂದು ಸಾಮುದ್ರಿಕ ಶಾಸ್ತ್ರದಲ್ಲಿ ತಿಳಿಸಿರುವಂತೆ ಮಹಾಪುರುಷನ ಲಕ್ಷಣಗಳಲ್ಲಿ ಒಂದಾದ 'ಕೆಂಪಾದ ಪಾದಗಳುಳ್ಳವನು' -- ಎಂಬ ಸ್ವರೂಪವು 'ಅತಿಶಯವಾದ ಅರುಣ ವರ್ಣವುಳ್ಳವಾಗಿಯೂ, ಅತಿಶಯ ಸುಗಂಧವುಳ್ಳವಾಗಿಯೂ ಇವೆ' ಎಂಬುದು ಸೂಚಿತವಾಗುತ್ತದೆ. ಅಲ್ಲದೆ -- ಆಗ ತಾನೆ ವಿಕಾಸಗೊಳ್ಳುತ್ತಿರುವ' -- ಎನ್ನುವುದರಿಂದ ಪರಮಾತ್ಮನ ಕಣ್ಣುಗಳು ಸೂರ್ಯಚಂದ್ರಾತ್ಮಕವಾದವು -- ಎಂಬ ವಿಶೇಷಾರ್ಥವು ಸ್ಫುಟವಾಗುತ್ತದೆ. ಸೂರ್ಯೋದಯವಾಗುವುದರೊಡನೆ ಕಮಲವು ವಿಕಾಸಗೊಳ್ಳುವುದು ಸ್ವಾಭಾವಿಕ. ಅದರಂತೆಯೇ ಶ್ರೀ ವೇಂಕಟೇಶನ ಅಪಾಂಗ ವೀಕ್ಷಣದಿಂದ ಸರ್ವದಾ ಪಾದಪದ್ಮಗಳು ಉದಿತೋದಿತವಾದಂತೆ ವಿಕಾಸೋನ್ಮುಖವಾಗಿರುವುದೂ ಸ್ವಾಭಾವಿಕ. ಆದುದರಿಂದಲೇ ಪರಮಾತ್ಮನ ಕಣ್ಣುಗಳು ಸೂರ್ಯಚಂದ್ರಾತ್ಮಕವಾದವು -- ಎಂಬ ಅಭಿಪ್ರಾಯವು ಧ್ವನಿತವಾಗುವುದು. ಸೂರ್ಯ ಚಂದ್ರರು ಪರಮಾತ್ಮನ ಕಣ್ಣುಗಳೆಂಬುದಕ್ಕೆ ಶ್ರೀವಿಷ್ಣು ಸಹಸ್ರನಾಮ ಸ್ತೋತ್ರದ ಪೂರ್ವಪೀಠಿಕೆಯಲ್ಲಿ ಧ್ಯಾನದ ಪ್ರಸಂಗದಲ್ಲಿ -- 'ಭೂಃ ಪಾದೌ ಯಸ್ಯ ನಾಭಿರ್ವಿಯದಸುರನಿಲಶ್ಚಂದ್ರಸೂರ್ಯೌ ಚ ನೇತ್ರೇ' -- ಎಂಬ ಧ್ಯಾನ ಶ್ಲೋಕದ ಚರಣದ ಒಂದು ಭಾಗವೇ ಪ್ರಮಾಣವಾಗಿರುವುದು. ಆದುದರಿಂದ ಪರಮಾತ್ಮನ ಚರಣಾರವಿಂದಗಳು ನನಗೆ ರಕ್ಷಕವಾಗಲಿ ಎಂಬುದು ಇದರ ಪರಮಾರ್ಥ.

ರೇಖಾಮಯಧ್ವಜ ಸುಧಾಕಲಶಾತಪತ್ರ--
ವಜ್ರಾಂಕುಶಾಂಬುರುಹ ಕಲ್ಪಕ ಶಂಖಚಕ್ರೈಃ,
ಭವ್ಯೈರಲಂಕೃತತಲೌ ಪರತತ್ತ್ವ ಚಿಹ್ನೈಃ
ಶ್ರೀವೇಂಕಟೇಶಚರಣೌ ಶರಣಂ ಪ್ರಪದ್ಯೇ. ೫

ಪರತತ್ತ್ವದ ಅಸಾಧಾರಣ ಚಿಹ್ನೆಗಳಾದ ರೇಖಾರೂಪದಿಂದಿರುವ ಧ್ವಜ, ಶಂಖ, ಚಕ್ರವೇ ಮೊದಲಾದ ಮಂಗಳಕರವಾದ ಚಿಹ್ನೆಗಳಿಂದ ಅಲಂಕೃತವಾದ ಶ್ರೀ ವೇಂಕಟೇಶನ ಚರಣಗಳನ್ನು ರಕ್ಷಕವನ್ನಾಗಿ ಆಶ್ರಯಿಸಿದ್ದೇನೆ.

ಸಾಮಾನ್ಯವಾಗಿ ಈ ಲೋಕದಲ್ಲಿ ಸಣ್ಣ ಪುಟ್ಟ ರಾಜ್ಯಗಳಿಗೆ ಅಧಿಪತಿ ಯಾದವನನ್ನು ರಾಜ ಅಥವಾ ಮಹಾರಾಜನೆನ್ನುತ್ತಾರೆ. ಅಂತಹ ರಾಜ ನಾಗಬೇಕಾದರೆ ಲೋಕಪಾಲಕರ ಅಂಶವಿರಬೇಕೆಂದೂ, ಮುಖ್ಯವಾಗಿ ಲೋಕದ ಸ್ಥಿತಿಕಾರಕನಾದ ವಿಷ್ಣುವಿನ ಅಂಶವಿರಬೇಕೆಂದೂ, ಹಾಗಿಲ್ಲದಿದ್ದರೆ ರಾಜನಾಗಲಾರನೆಂದೂ ಪ್ರಸಿದ್ಧವಾಗಿದೆ. 'ನಾ ವಿಷ್ಣುಃ ಪೃಥಿವೀ ಪತಿಃ' ಎಂಬ ವಾಕ್ಯವು ಇದನ್ನು ಸಮರ್ಥಿಸುತ್ತದೆ. ಹಾಗೂ ರಾಜನಾಗುವವನ ಅಂಗೈ ಅಂಗಾಲುಗಳಲ್ಲಿ ಉತ್ತಮ ಪುರುಷನ, ಅದರಲ್ಲಿಯೂ ಸಾಮ್ರಾಜ್ಯಾಧಿಪನ ಚಿಹ್ನೆಗಳಾದ ಶಂಖ, ಚಕ್ರ, ಕಮಲವೇ ಮೊದಲಾದ ಚಿಹ್ನೆಗಳು ಅಂಕಿತವಾಗಿರುವು ವೆಂಬುದನ್ನು ನಾವು ಅನುಭವದಿಂದ ಕಂಡಿರುವೆವು. ಹೀಗಿರುವಲ್ಲಿ ಸಕಲ ಲೋಕಾಧ್ಯಕ್ಷನಾಗಿಯೂ--

'ಯಸ್ಮಾತ್ ಕ್ಷರಮತೀತೋಽ ಹಮಕ್ಷರಾದಪಿ ಚೋತ್ತಮಃ
ಅತೋಸ್ಮಿ ಲೋಕೇ ವೇದೇ ಚ ಪ್ರಥಿತಃ ಪುರುಷೋತ್ತಮಃ'--

ಎಂದು ಗೀತೆಯಲ್ಲಿ ಹೇಳಿರುವಂತೆ ಪುರುಷೋತ್ತಮನಾಗಿಯೂ 'ತಮೀಶ್ವರಾಣಾಂ ಪರಮಂ ಮಹೇಶ್ವರಂ ತಂ ದೇವತಾನಾಂ ಪರಮಂ ಚ ದೈವತಮ್' --ಎಂದು ಶ್ರುತಿಯಿಂದ ಕೀರ್ತಿಸಲ್ಪಟ್ಟಿರುವ ಪರದೇವತೆಯಾಗಿಯೂ, 'ಅನಾದಿನಿಧನಂ ವಿಷ್ಣುಂ ಸರ್ವಲೋಕ ಮಹೇಶ್ವರಂ! ...... ಪರಮಂ ಯೋ ಮಹತ್ತೇಜಃ, ಪರಮಂ ಯೋ ಮಹತ್ ಬ್ರಹ್ಮ.... .... ....' ಎಂಬುದಾಗಿ ದಿವ್ಯ ಜ್ಞಾನಿಯಾದ ಭೀಷ್ಮನಿಂದ ಸ್ತುತಿಸಲ್ಪಟ್ಟ ಪರಾತ್ಪರನಾದ ಬ್ರಹ್ಮನಾಗಿಯೂ ಇರುವ ಪರಮಾತ್ಮನು ಪರತತ್ತ್ವವ ಅಂದರೆ ಪರಬ್ರಹ್ಮನ ಚಿಹ್ನೆಗಳಿಂದ -- ಶಂಖ ಚಕ್ರಾದಿ ರೇಖೆಗಳಿಂದ ಅಂಕಿತವಾದ ಪಾದಗಳುಳ್ಳವನು ಎಂಬುದು ಸ್ಫುಟವಾದುದು, ಅಂತಹ ಪಾದಗಳು ನನಗೆ ರಕ್ಷಕವಾಗಲಿ.

ತಾಮ್ರೋದರದ್ಯುತಿಪರಾಜಿತ ಪದ್ಮರಾಗೌ
ಬಾಹ್ಯೈರ್ಮಹೋಭಿರಭಿಭೂತಮಹೇಂದ್ರನೀಲೌ,
ಉದ್ಯನ್ನಖಾಂಶುಭಿರುದಸ್ತ ಶಶಾಂಕಭಾಸೌ
ಶ್ರೀವೇಂಕಟೇಶಚರಣೌ ಶರಣಂ ಪ್ರಪದ್ಯೇ. ೬

ಅಂಗಾಲಿನ ಅರುಣಕಾಂತಿಯಿಂದ ತಿರಸ್ಕರಿಸಲ್ಪಟ್ಟ ಪದ್ಮರಾಗಮಣಿವುಳ್ಳವನಾಗಿಯೂ, ಮುಂಗಾಲಿನ ಕಾಂತಿಯಿಂದ ಇಂದ್ರನೀಲಮಣಿಯ ಕಾಂತಿಯನ್ನು ಮರೆ ಮಾಡುವುವಾಗಿಯೂ, ಚಿಮ್ಮುತ್ತಿರುವ ಉಗುರುಗಳ ಕಾಂತಿಯಿಂದ ಚಂದ್ರಿಕೆಯನ್ನು ಸೋಲಿಸುತ್ತಲೂ ಇರುವ ಶ್ರೀ ವೇಂಕಟೇಶನ ಪಾದಾರವಿಂದಗಳನ್ನು ರಕ್ಷಕವನ್ನಾಗಿ ಆಶ್ರಯಿಸಿದ್ದೇನೆ.

ಪರಮ ಭಾವುಕನೂ ಪರಮ ಭಕ್ತನೂ ಆದ ಕವಿಯು ಪರಮಾತ್ಮನ ಪಾದಾರವಿಂದಗಳನ್ನು ರಕ್ಷೆಯನ್ನಾಗಿ ಆಶ್ರಯಿಸುತ್ತಾ ಅವುಗಳ ಅಲೌಕಿಕವಾದ ಸೌಂದರ್ಯಾತಿಶಯವನ್ನು ಅನುಭವಿಸುವ ರೀತಿಯು ಆಮೋಘವಾದುದು. ಕೆಂಪು ರತ್ನಗಳನ್ನು ತಿರಸ್ಕರಿಸುವ ಅಂಗಾಲಿನ ಕಾಂತಿ -- ಎಂದು ವರ್ಣಿಸಿರುವುದರಿಂದ ಪರಮಾತ್ಮನ ಅಂಗಾಲುಗಳು ಅತ್ಯಂತ ಅರುಣವಾದವೆಂದು ತಿಳಿದುಬರುತ್ತವೆ. ಅಥವಾ 'ಪರಾಜಿತ ಪದ್ಮರಾಗೌ' ಎಂಬ ಪದಕ್ಕೆ ಕಮಲಗಳ ಕಾಂತಿಯನ್ನು ತಿರಸ್ಕರಿಸುವ -- ಎಂಬ ಅರ್ಥವನ್ನು ಮಾಡಬಹುದು. ಆಗ, ಪರಮಾತ್ಮನ ಪಾದಾರವಿಂದಗಳು ಸೂರ್ಯನ ಕಾತಿಯಿಂದ ವಿಕಸಿತವಾಗಿರುವ ಕೆಂದಾವರೆಯ ಪಾಟಲವರ್ಣವನ್ನು ತಿರಸ್ಕರಿಸುವಂತಹವು -- ಎಂದು ಅರ್ಥವಾಗುತ್ತದೆ. ಅದರಿಂದ ಪರಮಾತ್ಮನ ಚರಣಗಳು ವಿಕಸಿತವಾಗುತ್ತಿರುವ ತಾವರೆಯಂತೆ ಕೋಮಲವಾಗಿಯೂ, ನಿರತಿಶಯ ಸುಗಂಧಯುಕ್ತವಾಗಿಯೂ, ಅತ್ಯಂತ ಭೋಗ್ಯವಾಗಿಯೂ ಇವೆಯೆಂದು ಭಾಸವಾಗುತ್ತವೆ. ಹೊರಗಿನ ಕಾಂತಿಯಿಂದ ಇಂದ್ರ ನೀಲಮಣಿಯ ಕಾಂತಿಯನ್ನು ಪರಾಭವಗೊಳಿಸುವ ಪಾದಗಳೆಂದು ವರ್ಣಿಸುವುದರಿಂದ ಪರಮಾತ್ಮನು 'ನೀಲಮೇಘಶ್ಯಾಮ' ನೆಂಬುದು ವ್ಯಕ್ತವಾಗುವುದು. ಶ್ರೇಷ್ಠವಾದ ಇಂದ್ರ ನೀಲಮಣಿಯನ್ನು ಹಾಲಿನಲ್ಲಿಟ್ಟರೆ ಹಾಲೆಲ್ಲವೂ ನೀಲವಾಗಿ ಕಂಡುಬಂದರೆ ಅದು ಶ್ರೇಷ್ಠವಾದ ಇಂದ್ರ ನೀಲವೆಂದು ಹೇಳುವರು. ಅದರಂತೆ ಮುಂಗಾಲಿನ ಕಾಂತಿಯಿಂದ ಇಂದ್ರನೀಲಮಣಿಯು ಪರಾಭವಗೊಂಡಿತೆಂದರೆ, ಅವನ 'ನೀಲಮೇಘ ಶ್ಯಾಮಲತ್ವವು' ಸ್ಪಷ್ಟವಾಗುವುದು. ಹೀಗೆಯೇ ಉಗುರುಗಳ ಕಾಂತಿಯಿಂದ ಚಂದ್ರ ಕಿರಣಗಳ ಸೋಲಿಸಲ್ಪಟ್ಟವೆಂದರೆ ಉಗುರುಗಳು ಚಂದ್ರಿಕೆಗಿಂತಲೂ ಧವಳವಾಗಿವೆಯೆಂದು ತಿಳಿದುಬರುತ್ತದೆ. ಅಲ್ಲದೆ ಪಾದಗಳ ಒಂದೊಂದು ಉಗುರೂ ಸಹ ನೀಲವಾಗಿ ಕಂಡುಬರುವ ಆಕಾಶದಲ್ಲಿ ಚಂದ್ರನು ವಿರಾಜಿಸುವಂತೆ ನೀಲಮೇಘಶ್ಯಾಮಲನಾದ ಆತನ ಪಾದಗಳಲ್ಲಿ ಸಚ್ಛವಾಗಿಯೂ, ಸುಂದರವಾಗಿಯೂ, ಅತ್ಯಂತ ಶೀತಲವಾಗಿಯೂ ಇರುವ ಅನಂತ ಚಂದ್ರರಂತೆ ವಿರಾಜಿಸುತ್ತಿರುವುದೆಂದು ಧ್ವನಿತವಾಗುತ್ತವೆ. ಆದುದರಿಂದ ಅಂತಹ ದಿವ್ಯ ಸುಂದರ ಪಾದಾರವಿಂದಗಳನ್ನು ಆಶ್ರಯಿಸುವ ಅನುಭವವನ್ನು ಪಡೆಯುವುದೇ ಪರಮ ಭಾಗ್ಯವೆಂದು ಇದರ ಅಭಿಪ್ರಾಯ.

ಸಪ್ರೇಮಭೀತಿಕಮಲಾಕರಪಲ್ಲವಾಭ್ಯಾಂ
ಸಂವಾಹನೇಽಪಿ ಸಪದಿ ಕ್ಲಮಮಾದಧಾನೌ,
ಶಾಂತಾವವಾಙ್ಮನಸಗೋಚರಸೌಕುಮಾರ್ಯೌ
ಶ್ರೀವೇಂಕಟೇಶಚರಣೌ ಶರಣಂ ಪ್ರಪದ್ಯೇ. ೭

ಶ್ರೀದೇವಿ ಕಮಲೆಯು ಚಿಗುರಿನಂತಹ ತನ್ನ ಕೈಗಳಿಂದ ಪ್ರೇಮದಿಂದಲೂ, ಭಯದಿಂದಲೂ ಮೃದುವಾಗಿ ಚರಣಗಳನ್ನು ಒತ್ತುತ್ತಿದ್ದರೂ ಕೂಡಲೇ ಬಾಡಿಹೋಗುತ್ತಿರುವ, ಆದುದರಿಂದಲೇ ಮಾತಿನಿಂದ ತಿಳಿಸಲೂ-- ಮನಸ್ಸಿನಿಂದ ಯೋಚಿಸಲೂ

ಆಗದಷ್ಟು ಕೋಮಲವಾಗಿರುವ, ಮನೋಹರವಾದ ಶ್ರೀ ವೇಂಕಟೇಶನ ಚರಣಗಳನ್ನು ರಕ್ಷಕವನ್ನಾಗಿ ಆಶ್ರಯಿಸಿದ್ದೇನೆ.

ನೋಡಿ, ಎಂತಹ ರಮ್ಯವಾದ ಭಾವ! ಜಗನ್ಮಾತೆಯಾದ ಶ್ರೀದೇವಿಯು ಪರಮಾತ್ಮನ ಪಾದಸೇವೆಯಲ್ಲಿ ನಿರತಳಾಗಿದ್ದಾಳೆ. ಸಮಸ್ತ ಲೋಕಗಳನ್ನೂ ತನ್ನ ಒಂದು ಕಟಾಕ್ಷಲೇಶದಿಂದಲೇ ತಿರುಗು ಮುರುಗು ಮಾಡುವ ಶಕ್ತಿಯುಳ್ಳ ಶ್ರೀದೇವಿಯು ಅನವರತ ಕೈಂಕರ್ಯದಲ್ಲಿ ಆಸಕ್ತಳಾಗಿದ್ದಾಳೆ. ಅದೂ ಹೇಗೆ? ಪ್ರೇಮದಿಂದಲೂ ಭಯದಿಂದಲೂ ಅವಿನಾಭೂತವಾದ ನಿತ್ಯಯೋಗ (ನಿತ್ಯಸಂಬಂಧ) ವಿರುವುದರಿಂದ ಆತನ ಸೇವೆಯಲ್ಲಿ ಒಂದು ಸ್ವಾಭಾವಿಕವಾದ ಪ್ರೇಮ, ತನ್ನವನೆಂಬ ಒಂದು ಸಹಜವಾದ ಪ್ರೇಮ, ಪ್ರೇಮದಿಂದ ಸಲ್ಲಿಸುವ ಸೇವೆಯು ಪೂರ್ಣವಾಗುತ್ತದೆ, ತೃಪ್ತಿಕರವಾಗಿರುತ್ತದೆ. ಸೇವೆಯು ಮಾಡುವವರಿಗೂ ಆತ್ಮತೃಪ್ತಿಯುಂಟಾಗುತ್ತದೆ. ಇದನ್ನು ಮಾಡುವುದು ತನ್ನ ಕರ್ತವ್ಯ; ಇದನ್ನು ಮಾಡುವುದರಿಂದಲೇ ತನ್ನ ಜೀವನದ ಸಾರ್ಥಕ್ಯ -- ಎಂಬ ಫಲಸಂಗರಹಿತವಾದ ನಿಷ್ಕಾಮಕರ್ಮದ ರಹಸ್ಯವನ್ನು ಬಹುಸುಲಭವಾಗಿ ಬೋಧಿಸುತ್ತಿದ್ದಾಳೆ. ಶ್ರೀದೇವಿ -- ತನ್ನನ್ನು ಪುರುಷಕಾರವಾಗಿ ಆಶ್ರಯಿಸಿ, ಉಜ್ಜೀವಿಸದೇಕೆಂಬ ಚೇತನರನ್ನು ಕುರಿತು. ನೋಡಿ, ಇದು ಎಂತಹ ಮಧುರವಾದ, ಮಾದರಿಯಾದ ಉಪದೇಶದ ಕ್ರಮ! ಸಾವಿರಾರು ಮಾತುಗಳನ್ನಾಡಿದರೂ, ಉಪದೇಶಮಾಡಿದರೂ ಸಫಲವಾಗಲಾರದು. ಅದನ್ನು ಒಂದು ಆಚರಣೆಯಿಂದ ಸುಲಭವಾಗಿ ತಿಳಿಸಬಹುದೆಂಬ ವಿಚಾರವು ಬಹು ಹೃದಯಂಗಮವಾಗಿ ನಿರೂಪಿಸಲ್ಪಟ್ಟಿದೆ. ಅಂತಹ ಜಗನ್ಮಾತೆಯಾದ ಶ್ರೀದೇವಿಯು ಪ್ರೇಮದಿಂದ ಮಾತ್ರವೇ ಅಲ್ಲ -- ಭಯದಿಂದಲೂ ಪಾದಗಳನ್ನು ಒತ್ತುತ್ತಿದ್ದಾಳೆ, ಸಾಧಾರಣವಾಗಿ ಪುರುಷರ ಅವಯವಗಳಿಗಿಂತಲೂ, ವನಿತೆಯರ ಅವಯವಗಳು ಕೋಮಲವಾದವೆಂಬುದು ಅನುಭವವೇದ್ಯವಾದುದು ಮಾತ್ರವೇ ಅಲ್ಲದೇ ಜಗತ್ಪ್ರಸಿದ್ಧವೂ ಆದುದು. ಅಂತೆಯೇ ಶ್ರೀದೇವಿಯ ಕೈಗಳು--ಪಲ್ಲವಗಳು-- ಅಂದರೆ ಚಿಗುರಿನಂತವು ಇದನ್ನು ಸಮರ್ಥಿಸುತ್ತ ಶ್ರುತಿಯಲ್ಲಿ -- ಪದ್ಮಪ್ರಿಯೇ, ಪದ್ಮಿನಿ, ಪದ್ಮಹಸ್ತೇ, ಪದ್ಮಾಲಯೇ, ಪದ್ಮದಳಾಯತಾಕ್ಷಿ-- ಎಂದೂ;

ಪದ್ಮಪ್ರಿಯಾಂ ಪದ್ಮಹಸ್ತಾಂ ಪದ್ಮಾಕ್ಷೀಂ ಪದ್ಮಸುಂದರೀಮ್
ಪದ್ಮೋದ್ಭವಾಂ ಪದ್ಮಮುಖೀಂ ಪದ್ಮನಾಭಪ್ರಿಯಾಂ ರಮಾಮ್
ಪದ್ಮಮಾಲಾಧರಾಂ ದೇವೀಂ ಪದ್ಮಿನೀಂ ಪದ್ಮಗಂಧಿನೀಮ್

--ಎಂದು ಲಕ್ಷ್ಮಿಯ ಅಷ್ಟೋತ್ತರ ಶತನಾಮ ಸ್ತೋತ್ರದಲ್ಲಿಯೂ ಇನ್ನೂ, ಅನೇಕ ಇದಿಹಾಸ ಪುರಾಣಗಳಲ್ಲಿಯೂ ಕೀರ್ತಿಸಲ್ಪಟ್ಟಿದೆ. ಸ್ವತಃ ಅವಳು ಪದ್ಮೆ; ಪದ್ಮೋದ್ಭವೆ; ಪದ್ಮನಿವಾಸಿನಿ; ಪದ್ಮಮುಖಿ; ಪದ್ಮನೇತ್ರೆ; ಪದ್ಮಹಸ್ತೆ; ಪದ್ಮಮಾಲಾಧಾರಿಣಿ; ಪದ್ಮಗಂಧಿನಿ; ಮತ್ತು ಪ್ರಿಯೆಯಾದ ವಿಷ್ಣುಪ್ರಿಯೆ. ಇಂತಹ ಕುಸುಮ ಕೋಮಲವಾದ ಕಮಲೆಯು (ಶ್ರೀದೇವಿ) ಪರಮಾತ್ಮನ ಚರಣಗಳನ್ನು ಭಯದಿಂದ ಒತ್ತುತ್ತಿದ್ದಾಳೆ. ಆತನ ಪಾದಗಳು ತನ್ನ ಒತ್ತುವಿಕೆಯಿಂದ ಎಲ್ಲಿ ಬಾಡಿಹೋಗುವುವೋ ಎಂಬ ಹೆದರಿಕೆಯಿಂದಲೇ ಒತ್ತುತ್ತಿದ್ದಾಳೆ. ಆದರೂ ಆ ಚರಣಗಳು ಕಮಲೆಯ ಕೋಮಲ ಕರಸ್ಪರ್ಶದಿಂದಲೂ ಬಾಡಿಹೋಗುತ್ತಿವೆ ಎಂದ ಮೇಲೆ ನಿಜವಾಗಿಯೂ ಆತನ ಅವಯವಗಳು ಮಾತಿಗೂ, ಮನಸ್ಸಿಗೂ ಸಿಲುಕದಷ್ಟು ಸುಕುಮಾರವಾದುವೇ ಸರಿ, ಯಾವನ ಮನಸ್ಸು ಮತ್ತು ಕರ ಚರಣಾದಿಗಳು ದೈತ್ಯರನ್ನು ಕಂಡು, ದುಷ್ಟರನ್ನು ಕಂಡು ಅವರ ನಿಗ್ರಹದಲ್ಲಿ ವಜ್ರಕಿಂತಲೂ ಕಠೋರವಾಗಿ ಆಗುವುವೋ ಅವನ ಚರಣಗಳು ಅತಿಶಯಿತ ಸೌಂದರ್ಯದಿಂದ ಕುಸುಮಕ್ಕಿಂತಲೂ ಕೋಮಲವಾದವು -- ಎಂಬ ಭಾವವು ಬಹು ಮನೋಹರವಾದುದು, ಈ ಕಾರಣದಿಂದ ಜಗನ್ಮಾತೆಯಾದ ಶ್ರೀದೇವಿಯ ಮನಸ್ಸಿನಲ್ಲಿಯೂ ಸೇವೆಯನ್ನು ಸಲ್ಲಿಸುವಾಗ ಭಯವುಟಾಗಿದೆ.

ಎರಡನೆಯದಾಗಿ, ಅವನು ಪ್ರಭು; ಜಗತ್ಪ್ರಭು. ಶ್ರೀದೇವಿಯು ಜಗನ್ಮಾತೆಯೇ ಆದರೂ ಆತನ ಪ್ರಥಮ ಶಿಷ್ಯಳು. ಅವನು ಉಪದೇಶಕ -- ಆಚಾರ್ಯ; ಇವಳು ಉಪದೇಶ್ಯಳು -- ಶಿಷ್ಯಳು. ಅವನದು ಸ್ವಾಮ್ಯ; ಇವಳದು ದಾಸ್ಯ; ಆದುದರಿಂದಲೇ ಪ್ರಭುವಿನ ಉಪದೇಶಕನು ಅಥವಾ ಆಚಾರ್ಯನ ಸೇವೆಯನ್ನು ಸಲ್ಲಿಸುವಾಗ ಪ್ರೇಮವು ಎಷ್ಟು ಉಚಿತವೋ, ಭಯವೂ ಶಿಷ್ಯನಿಗೆ ಅಷ್ಟೇ ಉಚಿತವಾದುದು. ತಾನು ಎಷ್ಟೇ ಅಂತರಂಗ ಭಕ್ತಳಾದರೂ, ಆತ್ಮೀಯಳಾದರೂ ಶಿಷ್ಯಳೆಂಬುದನ್ನು ಆಕೆಯು ಮರೆತಿಲ್ಲ. ಆದುದರಿಂದಲೇ ಆಕೆಗೆ ಭಯವೂ ಸಹಜ; ಸ್ವಾಭಾವಿಕ. ಇದರಿಂದ ಜಗತ್ಪ್ರಭುವಿನ ಸೇವೆಯನ್ನು ಸಲ್ಲಿಸುವಾಗ ಪ್ರೇಮ (ಭಕ್ತಿ)ವು ಹೇಗೆ ಸ್ವಾಭಾವಿಕವೋ ಹಾಗೆಯೇ ಚೇತನರಿಗೆ ಅವನಲ್ಲಿ ಭಯವೂ ಸ್ವಾಭಾವಿಕವೆಂಬುದು ಸ್ಪಷ್ಟವಾಗುತ್ತದೆ. ಅಂತಹ ಸುಕುಮಾರವಾದ ಪಾದಗಳನ್ನು ಆಶ್ರಯಿಸಿದ ಚೇತನನೇ ಧನ್ಯನು.

ಲಕ್ಷ್ಮೀಮಹೀತದನುರೂಪನಿಜಾನುಭಾವ--
ನೀಲಾದಿದಿವ್ಯಮಹಿಷೀಕರಪಲ್ಲವಾನಾಮ್,
ಆರುಣ್ಯ ಸಂಕ್ರಮಣತಃ ಕಿಲ ಸಾಂದ್ರರಾಗೌ
ಶ್ರೀವೇಂಕಟೇಶಚರಣೌ ಶರಣಂ ಪ್ರಪದ್ಯೇ. ೮

ಈ ಪದ್ಯದಲ್ಲಿಯೂ ಪರಮಾತ್ಮನ -- ಸೌಕುಮಾರ್ಯಾತಿಶಯವನ್ನೇ ವರ್ಣಿಸುತ್ತಾನೆ--

ಶ್ರೀದೇವಿ, ಭೂದೇವಿ, ನೀಳಾದೇವಿಯೇ ಮೊದಲಾದ ತನಗೆ ಅನುರೂಪವಾದ ತನ್ನ ಮಹಿಷಿಯರ ಕರಪಲ್ಲವಗಳ ಸಂಪರ್ಕದಿಂದಲೇ ಅರುಣವಾಗಿವೆಯೋ ಎಂಬಂತಿರುವ ಶ್ರೀ ವೇಂಕಟೇಶನ ಚರಣಗಳನ್ನು ರಕ್ಷಕವನ್ನಾಗಿ ಆಶ್ರಯಿಸಿದ್ದೇನೆ.

ನಿತ್ಯಾನಮದ್ವಿಧಿಶಿವಾದಿಕಿರೀಟಕೋಟಿ--
ಪ್ರತ್ಯುಪ್ತದೀಪ್ತ ನವರತ್ನ ಮಹಃಪ್ರರೋಹೈಃ,
ನೀರಾಜನಾವಿಧಿಮುದಾರಮುಪಾದಧಾನೌ
ಶ್ರೀವೇಂಕಟೇಶಚರಣೌ ಶರಣಂ ಪ್ರಪದ್ಯೇ. ೯

ನವರತ್ನ ಖಚಿತವಾಗಿ ಥಳಥಳಿಸುವ ಕಿರೀಟಗಳನ್ನು ಧರಿಸಿದ ಬ್ರಹ್ಮ ರುದ್ರನೇ

ಮೊದಲಾದ ದೇವೋತ್ತಮರು ಪ್ರತಿದಿನವೂ ಬಂದು ಪಾದಾರವಿಂದಗಳ ನಮಸ್ಕಾರ ಮಾಡುವುದರಿಂದಲೇ ಧಾರಾಳವಾದ ನೀರಾಜನ (ಮಂಗಳಾರತಿ) ವನ್ನು ಅನುಭವಿಸುತ್ತಿರುವ ಶ್ರೀ ವೇಂಕಟೇಶನ ಚರಣಗಳನ್ನು ರಕ್ಷಕವನ್ನಾಗಿ ಆಶ್ರಯಿಸಿದ್ದೇನೆ.

ಬ್ರಹ್ಮನು ಜಗತ್ತಿನ ಸೃಷ್ಟಿಕರ್ತನು, ರುದ್ರನು ಲಯಕಾರಿ -- ಹೀಗೆಯೇ ಲೋಕ ಪಾಲಕರೇ ಮೊದಲಾದವರೆಲ್ಲರೂ ನಿತ್ಯವೂ ಪರಮಾತ್ಮನ ಸಂದರ್ಶನಕ್ಕಾಗಿ ಹೋಗುವರೆಂದೂ, ಹೋಗಿ ನಮಸ್ಕರಿಸುವಾಗ ದಿಕ್ಕು ದಿಕ್ಕಿಗೂ ಕಿರಣಗಳನ್ನು ಚೆಲ್ಲುವ ವಜ್ರ ವೈಡೂರ್ಯವೇ ಮೊದಲಾದ ನವರತ್ನಗಳಿಂದ ನಿರ್ಮಿತವಾದ ಕಿರೀಟಗಳನ್ನು ಧರಿಸಿಯುಳ್ಳ ತಮ್ಮ ತಲೆಗಳನ್ನು ಆತನ ಪಾದಾರವಿಂದಗಳಲ್ಲಿ ತಗ್ಗಿಸುವರು; ಒಬ್ಬೊಬ್ಬರಾಗಿ ನಮಸ್ಕರಿಸಿ, ಸಾಲಾಗಿ ನಿಲ್ಲುವ ಕ್ರಮದಲ್ಲಿ ಅವರ ಕಿರೀಟಗಳ ಕಾಂತಿಯೂ ಕ್ರಮ ಕ್ರಮವಾಗಿ ಮುಂದು ಮುಂದೆ ಹರಡುತ್ತದೆ. ಇದನ್ನು ನೋಡಿದರೆ; ದೇವಾಲಯದಲ್ಲಿ ಅರ್ಚಕನು ಕರ್ಪೂರವನ್ನು ಅಥವಾ ತುಪ್ಪದ ಬತ್ತಿಯನ್ನು ಹೊತ್ತಿಸಿ, ಆರತಿಯನ್ನೆತ್ತಿದರೆ ಯಾವ ರೀತಿಯಾದ ಜಾಜ್ವಲ್ಯಮಾನವಾದ ಪ್ರಕಾಶವು ಪ್ರದಕ್ಷಿಣವಾಗಿ ಚಲಿಸುವುದೋ ಅದರಂತೆ ಕ್ರಮವಾಗಿ ನಮಸ್ಕರಿಸುತ್ತಿರುವ, ಬ್ರಹ್ಮಾದಿ ದೇವತೆಗಳ ಕಿರೀಟಗಳ ಕಾಂತಿಯೂ ಆರತಿಯಂತೆ ಹರಡುತ್ತದೆ--ಎಂದು ವ್ಯಕ್ತವಾಗುತ್ತದೆ. ಅಂತಹ ಪಾದಗಳನ್ನು ವರ್ಣಿಸಿರುವುದರಿಂದ ಪರಮಾತ್ಮನ ಪುರುಷೋತ್ತಮತ್ವವು ಸ್ಪಷ್ಟವಾಗುತ್ತದೆ.

ಶ್ರೀಮನ್ನಾರಾಯಣನ ಈ ತತ್ತ್ವವು ಸಾಭಾವಿಕವಾದುದು; ನಿರವಧಿಕವಾದುದು; ಅತಿಶಯವಾದುದು. ಯಾವ ವೈದಿಕನು (ವೇದೋಕ್ತವಾದ ಮಾರ್ಗವನ್ನು ನಂಬಿ ಅನುಸರಿಸುವವನು. ಅಥವಾ ಅನುಮೋದಕನು) ಇದನ್ನು ಒಪ್ಪುವುದಿಲ್ಲ? ಆದುದರಿಂದಲೇ ಬ್ರಹ್ಮ ಶಿವ, ಇಂದ್ರನೇ ಮೊದಲಾದವರೆಲ್ಲರೂ ಇತನ ಮಹಿಮೆಯೆಂಬ ಸಮುದ್ರದ ಒಂದೊಂದು ಸಣ್ಣ ಬಿಂದುಗಳು. ಈ ಅಭಿಪ್ರಾಯವನ್ನು ಯಾಮುನಾಚಾರ್ಯರು ತಮ್ಮ ಸ್ತೋತ್ರರತ್ನದಲ್ಲಿ--

ಸ್ವಾಭಾವಿಕಾನವಧಿಕಾತಿಶಯೇಶಿತೃತ್ವಂ
ನಾರಾಯಣ ತ್ವಯಿ ನ ಮೃಷ್ಯತಿ ವೈದಿಕಃ ಕಃ?
ಬ್ರಹ್ಮಾ ಶಿವಶ್ಶತಮಖಃ ಪರಮಸ್ಸ್ವರಾಡಿತ್ಯೇಕೇಽಪಿ
ಯಸ್ಯ ಮಹಿಮಾರ್ಣವ ವಿಪ್ರುಷಸ್ತೇ

--ಎಂದು ಪ್ರತಿಪಾದಿಸಿರುತ್ತಾರೆ. ಆದುದರಿಂದ ಅಂತಹ ಜಗದ್ವಂದ್ಯನ ಪಾದಾರವಿಂದಗಳನ್ನು ಆಶ್ರಯಿಸುವುದು ಆತ್ಮೋದ್ಧಾರದ ಸುಲಭವೂ, ಶ್ರೇಯಸ್ಕರವೂ ಆದ ಉಪಾಯವೆಂಬುದು ಸಮಾಚೀನವಾದುದು.

ವಿಷ್ಣೋಃ ಪದೇ ಪರಮ ಇತ್ಯುದಿತಪ್ರಶಂಸೌ
ಯೌ ಮಧ್ವ ಉತ್ಸ ಇತಿ ಭೋಗ್ಯತಯಾಽಪ್ಯುಪಾತ್ತೌ,
ಭೂಯಸ್ತಥೇತಿ ತವ ಪಾಣಿತಲಪ್ರದಿಷ್ಟೌ
ಶ್ರೀವೇಂಕಟೇಶಚರಣೌ ಶರಣಂ ಪ್ರಪದ್ಯೇ. ೧೦

ಪರಮ ಶ್ರೇಷ್ಠವಾದ ವಿಷ್ಣುವಿನ ಪಾದಗಳೆಂದು ಹೊಗಳಲ್ಪಟ್ಟವುಗಳಾಗಿಯೂ, ಪರಮ ಭೋಗ್ಯವೆಂದು ಸ್ವೀಕರಿಸಲ್ಪಟ್ಟವಾಗಿಯೂ ಮತ್ತು ಅಭಯ ಹಸ್ತದಿಂದಲೇ -- 'ಮಾಮೇಕಂ ಶರಣಂ ವ್ರಜ' --ಎಂಬ ಉಪದೇಶಕ್ಕೆ ವಿಷಯವಾಗಿಯೂ ಇರುವ ಶ್ರೀ ವೇಂಕಟೇಶನ ಚರಣಗಳನ್ನು ರಕ್ಷಕವನ್ನಾಗಿ ಆಶ್ರಯಿಸಿದ್ದೇನೆ.

'ವಿಷ್ಣೋಃ ಪದೇ ಪರಮೇ ಮಧ್ವ ಉತ್ಸಃ' ಎಂಬ ಶ್ರುತಿಯ ವಾಕ್ಯದಿಂದ ಪರಮಾತ್ಮನ ಪಾದಾರವಿಂದಗಳು ಅತ್ಯಂತ ಶ್ರೇಷ್ಠವಾದುದರಿಂದಲೇ ಪರಮ ಭೋಗ್ಯವೆಂದೂ ಪ್ರಸಿದ್ಧವಾಗಿವೆ. ಆದರೆ, ಪ್ರಪಂಚದಲ್ಲಿರುವ ಚೇತನರೆಲ್ಲರೂ, ವೇದ ವೇದಾಂತಗಳ ಅಭ್ಯಾಸವನ್ನು ಮಾಡಿಯೇ ಆತ್ಮಜ್ಞಾನಿಗಳಾಗುವರೆಂದಾಗಲಿ, ಆತ್ಮೋಜ್ಜೀವನವನ್ನು ಮಾಡಿಕೊಳ್ಳುವರೆಂದಾಗಲಿ ಹೇಳುವುದು ಸಾಧ್ಯವೇ ಇಲ್ಲ. ಆದುದರಿಂದಲೇ ಪರಮ ಕರುಣಾಶಾಲಿಯೂ ಆಶ್ರಿತವತ್ಸಲನೂ ಆದ ಪರಮಾತ್ಮನು ತನಗೆ ಪ್ರಿಯವಾದ ವೈಕುಂಠವನ್ನು ಬಿಟ್ಟು, ಸ್ವಾಮಿ ಪುಷ್ಕರಿಣಿಯ ತೀರದಲ್ಲಿ ಶ್ರೀದೇವಿಯೊಡನೆ ವಿಹರಿಸುತ್ತಿರುವನೆಂಬುದೂ ತನ್ನ ನಿಲುವು ಭಂಗಿಯಲ್ಲಿ ಅಭಯಹಸ್ತದಿಂದ -- 'ಸರ್ವ ಪಾಪಹರವಾಗಿಯೂ ಸಮಸ್ತ ಫಲಪ್ರದವಾಗಿಯೂ ಇರುವ ನನ್ನ ಈ ಪಾದಗಳನ್ನು ಆಶ್ರಯಿಸಿ ನಿರ್ಭೀತರಾಗಿರಿ' -- ಎಂದು ಉಪದೇಶಿಸುತ್ತ ನಿಂತಿರುವನೆಂಬುದೂ ಪ್ರತ್ಯಕ್ಷಸಿದ್ಧವಾಗಿರುವುದು. ಅಂತಹ ಅವ್ಯಾಜಕರುಣಾಮೂರ್ತಿಯಾದ ಶ್ರೀವೇಂಕಟೇಶನ ಚರಣಾರವಿಂದಗಳನ್ನು ಆಶ್ರಯಿಸದೆ ಇರುವುದಕ್ಕಿಂತಲೂ ಮೂರ್ಖತನವು ಮತ್ತೊಂದಿಲ್ಲ.

ಪಾರ್ಥಾಯ ತತ್ಸದೃಶಸಾರಥಿನಾ ತ್ವಯೈವ
ಯೌ ದರ್ಶಿತೌ ಸ್ವಚರಣೌ ಶರಣಂ ವ್ರಜೇತಿ,
ಭೂಯೋಽಪಿ ಮಹ್ಯಮಿಹ ತೌ ಕರದರ್ಶಿತೌ ತೇ
ಶ್ರೀವೇಂಕಟೇಶಚರಣೌ ಶರಣಂ ಪ್ರಪದ್ಯೇ. ೧೧

ಶ್ರೀ ವೇಂಕಟೇಶ! ಹಿಂದೆ ಅರ್ಜುನನಿಗೆ ಅವನಿಗೆ ಸರಿಯಾದ ಸಾರಥಿಯಾದ ನಿನ್ನಿಂದಲೇ ತೋರಿಸಲ್ಪಟ್ಟವಾಗಿಯೂ, ಈಗ ಮತ್ತೆ ನೀನೇ ನಿನ್ನ ಕೈಯಿಂದ ನನಗಾಗಿ ತೋರಿಸಲ್ಪಟ್ಟವೂ ಆಗಿರುವ ನಿನ್ನ ಚರಣಗಳನ್ನು ರಕ್ಷಕವನ್ನಾಗಿ ಆಶ್ರಯಸಿದ್ದೇನೆ.

ಯಾವನು ತನ್ನನ್ನು ನಿಶ್ಚಲವಾದ ಭಕ್ತಿಯಿಂಧ ಅಚಲವಾದ ಶ್ರದ್ಧೆಯಿಂದ ಆಶ್ರಯಿಸುವನೋ ಅವನಿಗೆ ಪರಮಾತ್ಮನು, ಸರ್ವಸ್ವವನ್ನೂ ಕರುಣಿಸುವನು; ಭಕ್ತರ ದಾಸನಾಗುವನು; ತನ್ನದೇ ಆಗಿರುವ ಬ್ರಹ್ಮಾನಂದವನ್ನು ಅವರಿಗೂ ಕೊಡುವನು. ಹಿಂದೆ ಅರ್ಜುನನ ವ್ಯಾಮೋಹವನ್ನು ತೊಲಗಿಸಿ, ಕರ್ತವ್ಯನಿಷ್ಠನನ್ನಾಗಿ ಮಾಡಿ ಅವನ ಸಾರಥಿಯಾಗಿ 'ಪಾರ್ಥಸಾರಥಿ' --ಎಂದು ಅಂಕಿತನಾದನು. ಶ್ರೇಷ್ಠವಾದ ಗುರು ಶಿಷ್ಯ ಭಾವವನ್ನು ಲೋಕಕ್ಕೆ ಆರುಹಿದನು. ಇಷ್ಟಾದರೂ ಲೋಕವು ಎಚ್ಚರಗೊಳಲಿಲ್ಲ. ಪಾರ್ಥಸಾರಥಿಯ ಮಹಿಮಾ ವಿಶೇಷವು ಯುಗಾಂತರಕ್ಕೆ ಸಂಬಂಧಿಸಿರುವುದೆಂಬುವುದು ಮರೆಯುತ್ತ ಬಂದಿತು. ಮರೆಯದಿದ್ದ ಒಬ್ಬೊಬ್ಬರಾದರೂ ಪಾರ್ಥಸಾರಥಿಯನ್ನು ಮನುಷ್ಯಮಾತ್ರನೆಂದು ತಿಳಿದು, ಶ್ರೀಕೃಷ್ಣನೇ ಗೀತೆಯಲ್ಲಿ 'ಅವಜಾನಂತಿ ಮಾಂ ಮೂಢಾಃ ಮಾನುಷೀಂ ತನುಮಾಶ್ರಿತಂ' --ಎಂದು ಹೇಳಿರುವಂತೆ ತಿರಸ್ಕರಿಸಲಾರಂಭಿಸಿದರು. ಆದರೂ ಅಂತಹ

ಸಮಯದಲ್ಲಿಯೂ ತಿಳಿಯದ ಮಗುವು ತಪ್ಪುಮಾಡಿದರೆ ತಂದೆಯು ಕ್ಷಮಿಸುವುದೇ ಅಲ್ಲದೆ ಸರಿಯಾದ ದಾರಿಗೆ ತರುವ ಪ್ರಯತ್ನಮಾಡುವಂತೆ, ಚೇತನರ ಉಜ್ಜೀವನಕ್ಕಾಗಿಯೇ ಅರ್ಚಾವತಾರಿಯಾಗಿ ಶ್ರೀ ವೇಂಕಟೇಶನಾಗಿ ಅವತರಿಸಿ, ಇದೇ ಉಪದೇಶವನ್ನು ಮಾಡುತ್ತಿರುವನು. ಶ್ರೀಕೃಷ್ಣನಾಗಿ ಅವತರಿಸಿ, ಆಗಿನ ಕಾಲದಲ್ಲಿ ಅರ್ಜುನನೊಬ್ಬನಿಗೆ ಉಪದೇಶ ಮಾಡಿದರೆ, ಈಗ ಶೇಷಗಿರಿಯಲ್ಲಿ ನೆಲೆಸಿ, ಸಮಸ್ತರಿಗೂ ಉಪದೇಶಮಾಡುತ್ತಿರುವ ಸೌಲಭ್ಯವು ಅಸಾಧಾರಣವಾದುದು.

ಮನ್ಮೂರ್ಧ್ನಿ ಕಾಳಿಯಫಣೇ ವಿಕಟಾಟವೀಷು
ಶ್ರೀ ವೇಂಕಟಾದ್ರಿಶಿಖರೇ ಶಿರಸಿ ಶ್ರುತೀನಾಮ್,
ಚಿತ್ತೇಪ್ಯನನ್ಯಮನಸಾಂ ಸಮಮಾಹಿತೌ ತೇ
ಶ್ರೀವೇಂಕಟೇಶಚರಣೌ ಶರಣಂ ಪ್ರಪದ್ಯೇ. ೧೨

ನನ್ನ ತಲೆಯಮೇಲೆಯೂ, ಕಾಳಿಂಗಸರ್ಪನ ಹೆಡೆಯ ಮೇಲೆಯೂ, ಭಯಂಕರವಾದ ಕಾಡುಗಳಲ್ಲಿಯೂ, ಶ್ರೀವೇಂಕಟಾಚಲ ಶಿಖರದಲ್ಲಿಯೂ, ಶ್ರುತಿಗಳ ಶಿರಸ್ಸಿ (ಉಪನಿಷತ್ತುಗಳು) ನಲ್ಲಿಯೂ ಹಾಗೆಯೇ ಅನನ್ಯಮನಸ್ಕರಾಗಿ ಭಜಿಸುವವರ ಮನಸ್ಸಿನಲ್ಲಿಯೂ, ಒಂದೇ ಸಮನಾಗಿ ನೆಲೆಸಿರುವ ಶ್ರೀ ವೇಂಕಟೇಶನ ಚರಣಗಳನ್ನು ರಕ್ಷಕವನ್ನಾಗಿ ಆಶ್ರಯಿಸಿದ್ದೇನೆ.

ಶ್ರೀ ರಾಮಾನುಜಾಚಾರ್ಯರು ಪರಮಾತ್ಮನನ್ನು ಧ್ಯಾನಮಾಡುವ ರೀತಿಯನ್ನು ವಿವರಿಸುತ್ತಾ -- '..... ..... ..... ಶ್ರೀಮತ್ಪಾದಾರವಿಂದಯುಗಳಂ ಶಿರಸಿ ಕೃತಂ ಧ್ಯಾತ್ವಾ ಅದ್ಭುತಸಾಗರಾಂತರ್ನಿಮಗ್ನ ಸರ್ವಾವಯವಸ್ಸುಖಮಾಸೀತ' -- ಎಂದರೆ, 'ಶ್ರೀಮನ್ನಾರಾಯಣನ ಪಾದಾರವಿಂದಗಳನ್ನು ತಲೆಯ ಮೇಲೆ ಇರುವಂತೆ ಭಾವಿಸಿ, ಅಮೃತಸಾಗರದಲ್ಲಿ ಮುಳುಗಿರುವ ಸರ್ವಾವಯವವುಳ್ಳವನಾಗಿ ಸುಖವಾಗಿರಬೇಕು' --ಎಂದು ಉಪದೇಶಿಸಿರುವರು. ಅವರ ಆಚಾರ್ಯರಾದ ಶ್ರೀಯಾಮುನಾಚಾರ್ಯರೂ ಸಹ--

ಕದಾ ಪುನಶ್ಶಂಖರಥಾಂಗ ಕಲ್ಪಕ ಧ್ವಜಾ--ರವಿಂದಾಂಕಂಶವಜ್ರಲಾಂಛನಮ್
ತ್ರಿವಿಕ್ರಮ ತ್ವಚ್ಚರಣಾಂಬುಜದ್ವಯಂ ಮದೀಯಮೂರ್ಧಾನಮಲಂಕರಿಷ್ಯತಿ

--ಎಂದರೆ, ಮೂರು ವಿನ್ಯಾಸಗಳಿಂದ ಮೂರು ಲೋಕಗಳನ್ನೂ ಆಳಿದ ತ್ರಿವಿಕ್ರಮನೇ, ಶಂಖ ಚಕ್ರಾದಿ ರೇಖೆಗಳಿಂದ ಅಂಕಿತವಾದ ನಿನ್ನ ಪಾದಾರವಿಂದಯುಗಳವು ಎಂದಿಗೆ ನನ್ನ ತಲೆಯನ್ನು ಅಲಂಕರಿಸುವುದು? --ಎಂದು ಕುತೂಹಲದಿಂದ ಪಾದಾರವಿಂದಗಳ ಆಶ್ರಯವನ್ನು ನಿರೀಕ್ಷಿಸುತ್ತಿದ್ದಾರೆ. ಆತನ ಚರಣಾರವಿಂದಗಳು ಅಷ್ಟು ಮಹತ್ವವುಳ್ಳವು. ಅದರಂತೆಯೇ ಪರಮ ಭಕ್ತನಾದ ಕವಿಯೂ ಸಹ ಶ್ರೀವೇಂಕಟೇಶನ ಚರಣಗಳನ್ನು ತನ್ನ ತಲೆಯ ಮೇಲೆ ಇರುವಂತೆ ಭಾವಿಸಿರುವುದು ಸಹಜವೇ ಆಗಿರುವುದಲ್ಲದೆ ಸ್ವಸ್ವರೂಪವನ್ನು (ಜೀವನ ಸ್ವರೂಪವನ್ನು) ವ್ಯಕ್ತಗೊಳಿಸುತ್ತಲೂ ಇದೆ. ಕಾಳಿಂಗಸರ್ಪನ ತಲೆಯ ಮೇಲೆ ನಿಂತು ನಾಟ್ಯವಾಡಿದುದು, ಸಾಗರವನ್ನು ನಿಗ್ರಹಿಸುವುದೂ ಆಗಿದೆ. ಶ್ರೀರಾಮ ಶ್ರೀಕೃಷ್ಣಾದಿ ಅವತಾರಗಳಲ್ಲಿ ಭಯಂಕರವಾದ ಅರಣ್ಯಗಳಲ್ಲಿ ಸಂಚರಿಸಿದುದೂ ಕೂಡ ದುಷ್ಟನಿಗ್ರಹ ಶಿಷ್ಟಾನುಗ್ರಹಕ್ಕೆ ಎಂಬುದೂ ಪ್ರಸಿದ್ಧವಾಗಿದೆ. ಶ್ರೀ ವೇಂಕಟಾಚಲದಲ್ಲಿ ನೆಲೆಸಿರುವುದಂತೂ ಕರುಣೆಯ ಪರಾಕಾಷ್ಠೆ. ಉಪನಿಷತ್ತುಗಳಲ್ಲಿ ಕೀರ್ತಿಸಲ್ಪಟ್ಟಿರುವುದು ಪರಮ ಜ್ಞಾನಿಗಳಾದವರ ಆತ್ಮಾನಂದವನ್ನು ಸ್ಫೂರ್ತಿಗೊಳಿಸುತ್ತದೆ, ಅನನ್ಯ ಮನಸ್ಕರಾದವರ ಚಿತ್ತದಲ್ಲಿಯೂ ನೆಲೆಸಿರುವನೆನ್ನುವುದರಿಂದ ಗೀತೆಯಲ್ಲಿ --'ಮಯಿ ತೇ ತೇಷು ಚಾಽಪ್ಯಹಂ' -- ನನ್ನಲ್ಲಿ ಭಕ್ತರೂ, ಭಕ್ತರಲ್ಲಿ ನಾನೂ ಅವಿಚ್ಛಿನ್ನರಾಗಿ ಇರುತ್ತೇವೆಂದು ಹೇಳಿರುವ ಭಾವವು ಸ್ಪಷ್ಟವಾಗಿ ತೋರುವುದು. ಮೇಲೆ ತಿಳಿಸಿರುವಂತೆ ಎಲ್ಲ ಕಡೆಯಲ್ಲಿಯೂ ಒಂದೇ ಸಮನಾಗಿ ಪರಮಾತ್ಮನಿರುವನೆನ್ನುವುದರಿಂದ ಪರಮಾತ್ಮನು ಸರ್ವಾಂತರ್ಯಾಮಿ ಎಂಬುದೂ, ಅನನ್ಯಶರಣರಾಗಿ ಆಶ್ರಯಿಸುವವರಲ್ಲೆಲ್ಲ ವ್ಯಕ್ತವಾಗುವನೆಂಬುದೂ ಜೀವನಿಗೂ, ಪರಮಾತ್ಮನಿಗೂ ಶರೀರ ಶರೀರಿ ಸಂಬಂಧವುಂಟೆಂಬುದೂ, ತಿಳಿದು ಬರುತ್ತದೆ. (ಶರೀರ ಶರೀರಿ ಸಂಬಂಧವೆಂದರೆ, ನಾವು ಕಾಣುತ್ತಿರುವ ಪ್ರಪಂಚದಲ್ಲಿ ಪದಾರ್ಥಗಳನ್ನು ಸ್ಥೂಲವಾಗಿ, ಮೂರು ವಿಧವಾಗಿ ವಿಂಗಡಿಸಬಹುದು -- ಜಡಪದಾರ್ಥಗಳು, ಜೀವಗಳು, ಈಶ್ವರ. ಇದನ್ನೇ ಬಲ್ಲವರು ತತ್ವತ್ರಯವೆನ್ನುತ್ತಾರೆ. 'ನನ್ನ ಕೈ, ನನ್ನ ಕಣ್ಣು' --ಎಂದು ಲೋಕದಲ್ಲಿ ವ್ಯವಹಾರವಿರುವುದರಿಂದ ನಾನು ಎಂಬುದಕ್ಕೆ ವಿಷಯವೇ ಬೇರೆ, ಕೈ, ಕಣ್ಣು -- ಎಂಬ ಶರೀರದ ಅವಯವಗಳೇ ಬೇರೆ -- ಎಂಬುದಂತೂ ಸ್ಪಷ್ಟವಾಗಿ ತಿಳಿಯುತ್ತದೆ. ಆದ್ದರಿಂದ, ಬಾಹ್ಯದಲ್ಲಿ ಕಂಡುಬರುವ ಆಕೃತಿಗಳು ಪಂಚಭೂತಗಳ ಸೇರುವಿಕೆಯಿಂದ ಆಗಿರುವ ಜಡಪದಾರ್ಥಗಳ ರೂಪ ವಿಶೇಷಗಳು. ಇವುಗಳೇ ಪ್ರಾಣಿಗಳ ಅಥವಾ ಜೀವಗಳ ಶರೀರ. ಇಂತಹ ನಾನಾತೆರನಾದ ಶರೀರದಲ್ಲಿ ವ್ಯಾಪಾರವನ್ನುಂಟುಮಾಡಬಲ್ಲ ಚೇತನನೇ ಜೀವ. ಈ ಜೀವಗಳಿಗೆ ಶರೀರವು ಆಶ್ರಯವಾಗಿರುವುದು; ಜೀವನಿಗೆ ಅಥವಾ ಶರೀರಿಗೆ, ಆಶ್ರಯವಾದ ಆಕೃತಿಯೇ ಶರೀರ. ಹಾಗೆಯೇ 'ತೇನ ವಿನಾ ತೃಣಮಪಿ ನ ಚಲತಿ' -- 'ಸರ್ವೇಶ್ವರನಿಲ್ಲದೆ, ಅವನ ಇಚ್ಛೆಯಿಲ್ಲದೆ ಒಂದು ಹುಲ್ಲುಕಡ್ಡಿಯೂ ಚಲಿಸಲಾರದು' --ಎಂಬ ಆಪ್ತವಾಕ್ಯದಂತೆ ಆಕೃತಿಗೆ ವ್ಯಾಪಾರವನ್ನುಂಟು ಮಾಡಬಲ್ಲ ಜೀವವೂ ಸಹ ಅದರಲ್ಲಿ ಅಂತರ್ಯಾಮಿಯಾಗಿರುವ ಪರಮಾತ್ಮನ ಪ್ರೇರಣೆಯಿಲ್ಲದೆ ಶರೀರದಲ್ಲಿ ವ್ಯಾಪಾರವನ್ನುಂಟುಮಾಡಲಾರದು; ಆದುದರಿಂದಲೇ ಪರಮಾತ್ಮನಿಗೆ ಜೀವವೂ ಒಂದು ಶರೀರ. ಅದರಲ್ಲಿ ಅಂತರ್ಯಾಮಿಯಾಗಿರುವ ಈಶ್ವರನು ಶರೀರ. ಇದೇ ಶರೀರ -- ಶರೀರಿ ಸಂಬಂಧ ತತ್ವದ ಸಾರ.)

ಅಮ್ಲಾನ ಹೃಷ್ಯದವನೀತಲ ಕೀರ್ಣಪುಷ್ಪೌ
ಶ್ರೀ ವೇಂಕಟಾದ್ರಿಶಿಖರಾಭರಣಾಯಮಾನೌ,
ಆನಂದಿತಾಖಿಲಮನೋನಯನೌ ತವೈತೌ
ಶ್ರೀವೇಂಕಟೇಶಚರಣೌ ಶರಣಂ ಪ್ರಪದ್ಯೇ. ೧೩

ಬಾಡದೆ ವಿಕಸಿತವಾಗಿ ಭೂತಲದಲ್ಲಿ ಇಡಲ್ಪಟ್ಟ ಹೂವುಗಳಿಂತಿರುವ, ಶ್ರೀ ವೇಂಕಟಾಚಲದ ಶಿಖರಕ್ಕೆ ಆಭರಣಪ್ರಾಯವಾದ, ಸಮಸ್ತ ಜನರ ಮನಸ್ಸನ್ನೂ, ಕಣ್ಣುಗಳನ್ನೂ, ಆನಂದಗೊಳಿಸುವ ಶ್ರೀ ವೇಂಕಟೇಶನ ಚರಣಗಳನ್ನು ರಕ್ಷಕವನ್ನಾಗಿ ಆಶ್ರಯಿಸಿದ್ದೇನೆ.

ಲೋಕದಲ್ಲಿ ಸಾಮಾನ್ಯವಾಗಿ ಹೂವುಗಳು ವಿಕಸಿತವಾದ ಮೇಲೆ ಮ್ಲಾನವಾಗು

ವುದು (ಬಾಡಿಹೋಗುವುದು) ಸ್ವಭಾವ. ಆದರೆ, ಪರಮಾತ್ಮನ ಪಾದಗಳು ಎಂದೆಂದಿಗೂ ಯಾವಾಗಲೂ ವಿಕಸಿತವಾಗಿರುವ ಹೂವುಗಳೆಂದೂ ಭಕ್ತ ಕವಿಯು ವರ್ಣಿಸಿರುವುದರಿಂದ, ವಿಕಸಿತವಾದ ಪುಷ್ಪವು ಭೋಗ್ಯವಾಗಿರುವಂತೆ ನಿತ್ಯ ವಿಕಸಿತವಾದ ಪರಮಾತ್ಮನ ಪಾದಪುಷ್ಪಗಳು ನಿತ್ಯಭೋಗ್ಯವಾದವೆಂದೂ, ಪ್ರಸಾದೋನ್ಮುಖ (ಅನುಗ್ರಹಿಸಲು ಯೋಗ್ಯ) ವೆಂದೂ ಸೂಚಿತವಾಗುತ್ತದೆ.

ಶ್ರೀ ವೇಂಕಟಾಚಲದಲ್ಲಿ ಅನೇಕ ಸರೋವರಗಳೂ, ಗಿರಿ ನದಿಗಳೂ, ಜಲಪಾತಗಳೂ, ಪುಷ್ಪ ಭರಿತವಾಗಿಯೂ, ಫಲ ಭರಿತವಾಗಿಯೂ ಇರುವ ಮರಗಿಡಗಳೂ ಶೋಭಿಸುತ್ತಿವೆ. ಅಲ್ಲಿನ ಪ್ರಕೃತಿ ಸಂಪತ್ತಿನಿಂದಲೇ ಆ ಗಿರಿ ರಾಜನಿಗೆ ಅದ್ಭುತವಾದ ಸೌಂದರ್ಯವುಂಟಾಗಿದೆ. ಆದರೆ, ಗಿರಿಶಿಖರದಲ್ಲಿ ಶ್ರೀ ವೇಂಕಟೇಶನ ದಿವ್ಯಸುಂದರ ವಿಗ್ರಹವಿಲ್ಲದಿದ್ದರೆ ಆ ಸೌಂದರ್ಯವೆಲ್ಲವೂ ವ್ಯರ್ಥ; ಆತನ ದಿವ್ಯವಾದ ಪಾದಗಳಿಲ್ಲದಿದ್ದರೆ ಎಂತಹ ಸೌಂದರ್ಯವಿದ್ದರೂ ಶೂನ್ಯ. ಆದುದರಿಂದ ಆ ದಿವ್ಯವಾದ ಪಾದಗಳು ಆಭರಣಗಳಿಗೂ ಆಭರಣವಾಗಿ, ಸೌಂದರ್ಯವನ್ನು ಉಂಟುಮಾಡುತಕ್ಕವು. ಆದುದರಿಂದಲೇ ಸಮಸ್ತರ ಕಣ್ಮನಗಳನ್ನು ಆನಂದಗೊಳಿಸುವಂತಹ ಪಾದಗಳು. ಅಂತಹ ದಿವ್ಯ ಸುಂದರವೂ, ಪರಮ ಭೋಗ್ಯವೂ ಆದ ಪಾದಾರವಿಂದಗಳನ್ನು ಆಶ್ರಯಿಸಿ, ಜನ್ಮವನ್ನು ಸಾರ್ಥಕಪಡಿಸಿಕೊಳ್ಳುವುದೇ ಚೇತನನ ಪರಮ ಧರ್ಮ, ಪರಮ ಕರ್ತವ್ಯ.

ಪ್ರಾಯಃ ಪ್ರಪನ್ನಜನತಾ ಪ್ರಥಮಾವಗಾಹ್ಯೌ
ಮಾತುಃ ಸ್ತನಾವಿವ ಶಿಶೋರಮೃತಾಯಮಾನೌ,
ಪ್ರಾಪ್ತೌ ಪರಸ್ಪರ ತುಲಾಮತುಲಾಂತರೌ ತೇ
ಶ್ರೀವೇಂಕಟೇಶಚರಣೌ ಶರಣಂ ಪ್ರಪದ್ಯೇ. ೧೪

ಓ! ವೇಂಕಟೇಶ! ಪ್ರಪನ್ನ ಜನ ಸಮೂಹಕ್ಕೆ ಮುಖ್ಯವಾದ ಅವಲಂಬನವಾಗಿಯೂ, ಶಿಶುವಿಗೆ ಮಾತೆಯ ಸ್ತನ್ಯದಂತೆ ಅಮೃತಪ್ರಾಯವಾಗಿಯೂ, ಪರಸ್ಪರ ತಮ್ಮದೇ ಆದ ಸಾದೃಶ್ಯವುಳ್ಳವಾಗಿಯೂ, ಸದೃಶವಾದ ಮತ್ತೊಂದು ವಸ್ತುವಿಲ್ಲದೆಯೂ ಇರುವ ನಿನ್ನ ಚರಣಗಳನ್ನು ರಕ್ಷಕವನ್ನಾಗಿ ಆಶ್ರಯಿಸಿದ್ದೇನೆ.

ಪ್ರಪನ್ನರೆಂದರೆ -- ಮೋಕ್ಷವನ್ನು ಬಯಸಿ, ಅದಕ್ಕಾಗಿ ಅನೇಕ ಉಪಾಯಗಳು, ಕರ್ಮಜ್ಞಾನಾದಿಗಳು ಇದ್ದರೂ ಅವೆಲ್ಲವನ್ನೂ ಬಿಟ್ಟು ಕಾಮನಾರಹಿತರಾಗಿ ಶ್ರೀಕೃಷ್ಣನು ತೋರಿಸಿರುವ -- ಉಪದೇಶಿಸಿರುವ -- ಚರಮ ಶ್ಲೋಕವನ್ನು ನಂಬಿ ನಡೆಯತಕ್ಕವರು. ಅಂತಹ ಜನತೆಗೆ ಪರಮಾತ್ಮನ ಪಾದಾರವಿಂದಗಳೊಂದೇ ಅವಲಂಬವು, ಏಕೆಂದರೆ, ಅವರು ಅವುಗಳನ್ನಲ್ಲದೇ ಮತ್ತೊಂದನ್ನೂ ಆಶ್ರಯಿಸುವುದಿಲ್ಲ. ತಾಯಿಯ ಹಾಲನ್ನೇ ಕುಡಿಯುತ್ತಿರುವ ಮಗುವಿಗೆ ಮತ್ತೆ ಯಾವ ಆಹಾರವು ತಾನೇ ರುಚಿಸೀತು? ತಾಯಿಯ ಹಾಲೇ ಅಮೃತ. ಅದರಂತೆ ಪರಮಾತ್ಮನ ಪಾದಗಳು ಪ್ರಪನ್ನರಿಗೆ ಅಮೃತವು. ಈ ವಿಚಾರವನ್ನು ವ್ಯಕ್ತಗೊಳಿಸುತ್ತಾ ಶ್ರೀ ಯಾಮುನಾಚಾರ್ಯರು --

ತವಾಮೃತಸ್ಯಂದಿನಿ ಪಾದಪಂಕಜೇ ನಿವೇಶಿತಾತ್ಮಾ ಕಥಮನ್ಯದಿಚ್ಛತಿ
ಸ್ಥಿತೇ-ರವಿಂದೇ ಮಕರಂದನಿರ್ಭರೇ ಮಧುವ್ರತೋ ನೇಕ್ಷುರಸಂ ಹಿ ವೀಕ್ಷತೇ

--ಎಂದರೆ, ಮಕರಂದ (ಪುಷ್ಪರಸ) ದಿಂದ ತುಂಬಿರುವ ಕಮಲದಲ್ಲಿ ಇರುವ ದುಂಬಿಯು ಅದನ್ನು ಬಿಟ್ಟು, ಕಬ್ಬಿನರಸವನ್ನು ಹೇಗೆ ಆಶ್ರಯಿಸುವುದಿಲ್ಲವೋ ಹಾಗೆಯೇ ಎಲೈ ಪರಮಾತ್ಮನೇ! ಅಮೃತವನ್ನು ಸುರಿಸುವ ನಿನ್ನ ಪಾದಪಂಕಜದಲ್ಲಿ ಆಸಕ್ತನಾದ ಚೇತನನು ಹೇಗೆ ತಾನೆ ಇನ್ನೊಂದನ್ನು ಅಪೇಕ್ಷಿಸುವನು? ಎಂದು ಮಧುರವಾಗಿ ಹಾಡಿರುವರು. ಪರಮಾತ್ಮನ ಪಾದಗಳು ಅಂತಹ 'ಅಮೃತಸ್ಯಂದಿ' ಯಾದವು. ಅಂತಹ ಪಾದಗಳಿಗೆ ಹೋಲಿಕೆಯನ್ನು ಕೊಡಬಹುದಾದರೆ ಆತನ ದಕ್ಷಿಣ (ಬಲ) ಪಾದಕ್ಕೆ ವಾಮ (ಎಡ) ಪಾದವನ್ನೂ, ವಾಮಪಾದಕ್ಕೆ ದಕ್ಷಿಣ ಪಾದವನ್ನೂ ಹೋಲಿಸಬಹುದಲ್ಲದೆ ಹೊರತು ಮತ್ತೊಂದು ಸದೃಶವಾದುದಿಲ್ಲ. ಹಾಗೆನ್ನುವುದರಿಂದ ಪರಮಾತ್ಮನು "ನ ದ್ವಿತೀಯೋಽಸ್ತಿ ಕಶ್ಚಿತ್" -- ಎಂಬಂತೆ ಅದ್ವಿತೀಯನೆಂದು ಸ್ಪಷ್ಟವಾಗುವುದು. ಆದುದರಿಂದಲೇ ಪ್ರಪನ್ನರಾದವರು ಪರಮಾತ್ಮನ ಪಾದಪಂಕಜವನ್ನೊಂದನ್ನೇ ಅವಲಂಬಿಸಿರುವರೆಂಬುದು ಯುಕ್ತವಾದುದು ಮಾತ್ರವೇ ಅಲ್ಲದೇ ಪರಮೋಜ್ಜೀವನಕರವೂ ಆದುದು.

ಸತ್ತ್ವೋತ್ತರೈಸ್ಸತತಸೇವ್ಯಪದಾಂಬುಜೇನ
ಸಂಸಾರತಾರಕ ದಯಾರ್ದ್ರದೃಗಂಚಲೇನ,
ಸೌಮ್ಯೋಪಯಂತೃಮುನಿನಾ ಮಮ ದರ್ಶಿತೌ ತೇ
ಶ್ರೀವೇಂಕಟೇಶಚರಣೌ ಶರಣಂ ಪ್ರಪದ್ಯೇ. ೧೫

ಪರಮ ಸಾತ್ತ್ವಿಕರಿಂದ ಸಂತತವಾಗಿ ಆಶ್ರಯಿಸಲ್ಪಟ್ಟ ಪಾದಕಮಲಗಳುಳ್ಳವನೂ, ಆಶ್ರಯಿಸಿದವರಿಗೆ ಮುಕ್ತಿಯ ದಾರಿಯನ್ನು ತೋರಿಸುವ ಕೃಪಾದೃಷ್ಟಿಯುಳ್ಳವನೂ, ಆಚಾರ್ಯರೂ ಆದ ಸೌಮ್ಯಜಾಮಾತೃ ಮುನಿಗಳಿಂದ ನನಗೆ ತೋರಿಸಲ್ಪಟ್ಟ ನಿನ್ನ ಚರಣಗಳನ್ನು ರಕ್ಷಕವನ್ನಾಗಿ ಆಶ್ರಯಿಸಿದ್ದೇನೆ.

ಈ ಪದ್ಯದಿಂದ ಸೌಮ್ಯಜಾಮಾತೃಯೋಗಿಗಳ ಶಿಷ್ಯರೊಬ್ಬರು ಈ ಸ್ತೋತ್ರಗಳನ್ನು ರಚಿಸಿದರೆಂಬುದು ತಿಳಿದುಬರುತ್ತದೆ. ಸಚ್ಛಿಷ್ಯರೂ, ಪರಮ ಭಕ್ತರೂ, ಪ್ರಪನ್ನರೂ ಆದ ಕವಿವರ್ಯರು ತಮ್ಮ ಹೆಸರನ್ನು ಹೇಳಿಕೊಳ್ಳದೆ ಗುರುಗಳನ್ನು ಪ್ರಕಾಶಪಡಿಸಿದ್ದಾರೆ. ಇದು ಪ್ರಪನ್ನರಾದವರ ಕರ್ತವ್ಯವೇ ಸರಿ. 'ಅಂತಿಮೋಪಾಯ ನಿಷ್ಠೆ' -- ಬುದ್ಧಿವಂತನಾದವನು ಮಂತ್ರಪ್ರದನಾದ ಆಚಾರ್ಯನನ್ನು ಪ್ರಕಟಿಸಬೇಕೆಂದು ತಿಳಿಸಲ್ಪಟ್ಟಿದೆ, ಮುಮುಕ್ಷುವಾಗಿರುವವನು--

ಮಂತ್ರೇ ತದ್ದೇವತಾಯಾಂ ಚ ತಥಾ ಮಂತ್ರಪ್ರದೇ ಗುರೌ
ತ್ರಿಷು ಭಕ್ತಿಸ್ಸದಾ ಕಾರ್ಯಾ ಸಾ ಹಿ ಪ್ರಥಮಸಾಧನಮ್

--ಎಂದರೆ, ಸಂಸಾರತಾರಕವಾದ ಮಂತ್ರದಲ್ಲಿಯೂ, ಆ ಮಂತ್ರ ದೇವತೆಯಲ್ಲಿಯೂ, ಮಂತ್ರ ಪ್ರದನಾದ ಆಚಾರ್ಯನಲ್ಲಿಯೂ ಭಕ್ತಿಯನ್ನಿಡಬೇಕು; ಅದೇ ಅವನ

ಮುಖ್ಯವಾದ ಸಾಧನೆ. ಅವರಂತೆ ಭಕ್ತ ಕವಿಗಳು ತಮ್ಮ ಆಚಾರ್ಯರನ್ನು ಪ್ರಕಾಶಡಿಸಿದ್ದಾರೆ. ಅವರಿಂದ ತಾವು ಉತ್ತಮ ಭಕ್ತರಾಗಿದ್ದು ಇತರರೂ ಹಾಗೆಯೇ ಇರಬೇಕೆಂಬುದನ್ನು ತೋರಿಸಿದ್ದಾರೆ.

--ಹೀಗೆ ಶ್ರೀ ವೇಂಕಟೇಶ ಪ್ರಪತ್ತಿಯನ್ನು ಮಾಡಿ ಆತನ ನಿತ್ಯ ಕೈಂಕರ್ಯವನ್ನು ಪ್ರಾರ್ಥಿಸುತ್ತಾರೆ--

ಶ್ರೀಶ ಶ್ರೀಯಾ ಘಟಿಕಯಾ ತ್ವದುಪಾಯಭಾವೇ
ಪ್ರಾಪ್ಯೇ ತ್ವಯಿ ಸ್ವಯಮುಪೇಯತಯಾ ಸ್ಫುರಂತ್ಯಾ
ನಿತ್ಯಾಶ್ರಿತಾಯ ನಿರವದ್ಯಗುಣಾಯ ತುಭ್ಯಂ
ಸ್ಯಾಂ ಕಿಂಕರೋ ವೃಷಗಿರೀಶ ನ ಜಾತು ಮಹ್ಯಮ್ ೧೬

ಓ! ಶ್ರೀಯಃಪತಿಯಾದ ವೃಷಗಿರೀಶ! ಮುಮುಕ್ಷುವಿಗೆ ಪ್ರಾಪ್ಯ (ಹೊಂದಲು ಯೋಗ್ಯ) ನಾದ ನಿನ್ನ ವಿಷಯದಲ್ಲಿ ಘಟಿಕಾಸ್ವರೂಪಳಾದ ಶ್ರೀದೇವಿಯಿಂದ ನಿತ್ಯಾಶ್ರಿತನಾಗಿಯೂ, ಸಕಲ ಕಲ್ಯಾಣಗುಣಾಕರನಾಗಿಯೂ ಇರುವ ನಿನಗೆ ನಾನು ಎಂದೆಂದಿಗೂ ಕಿಂಕರನಾಗಿರುವೆನು.

ಶ್ರೀಯಃಪತಿಯಾದ ಶ್ರೀಮನ್ನಾರಾಯಣನು ಪ್ರಾಪ್ಯನು. ಪ್ರಪನ್ನನಾದ ಮುಮುಕ್ಷುವು ಆತನನ್ನು ಆಶ್ರಯಿಸಲು ಜಗನ್ಮಾತೆಯಾದ ಶ್ರೀದೇವಿಯು ಘಟಕ ಸ್ವರೂಪಳು. ಶ್ರೀಮನ್ನಾರಾಯಣನೊಡನೆ ಬಿಡಿಸಲಾರದ ಸಂಬಂಧವುಳ್ಳವಳಾದುದರಿಂದ ಸ್ವತಃ ಆಕೆಯೂ ಉಪೇಯಳೇ (ಪ್ರಾಪ್ಯಳು) ಆಗಿದ್ದರೂ ಚೇತನನ ಪಕ್ಷಪಾತಿಯಾಗಿ ಪುರುಷಕಾರ ಸ್ವರೂಪಳೆಂದು ಪ್ರಸಿದ್ಧಳಾಗಿರುವಳು. 'ಕಾರ್ಯಂ ಕರುಣಮಾರ್ಯೇಣ ನ ಕಶ್ಚಿನ್ನಾಪರಾಧ್ಯತಿ' -- ಅಂದರೆ, ಆತನು (ಶ್ರೀರಾಮನು) ಕೃಪೆಯನ್ನು ತೋರಿಸಬೇಕು; ಜೀವರಲ್ಲಿ ಯಾರು ತಾನೆ ತಪ್ಪು ಮಾಡುವುದಿಲ್ಲ? ಎಂದು ಸೀತಾದೇವಿಯು ನಿಗ್ರಹಾಸಕ್ತನಾದ ರಾಮನನ್ನು ಪ್ರಸನ್ನನಾಗಿ ಮಾಡುವುದನ್ನೂ, ಅಪರಾಧಿಯೇ ಆಗಿದ್ದರೂ ಕಾಕಾಸುರನ್ನು ರಕ್ಷಿಸುವುದನ್ನು ನಾವು ಶ್ರೀಮದ್ರಾಮಾಯಣದಲ್ಲಿ ನೋಡಬಹುದು. ಅಪರಾಧಿಯ ವಿಚಾರದಲ್ಲಿಯೂ ಇಷ್ಟೊಂದು ಕರುಣೆಯಿರುವಾಗ ನಿಜವಾದ ಭಕ್ತರಲ್ಲಿ ಕರುಣೆ ಮತ್ತು ವಾತ್ಸಲ್ಯವಿರುವುದನ್ನು ಕೇಳಬೇಕಾದುದೇನು? ಆದುದರಿಂದ ಆ ಶ್ರೀದೇವಿಯಿಂದಲೇ ಚೇತನನ ಇಷ್ಟಸಿದ್ಧಿ. ಆ ಇಷ್ಟಸಿದ್ಧಿಯಾದರೋ ಪರಮಾತ್ಮನ ನಿತ್ಯ ಕೈಂಕರ್ಯ 'ಚೇತನಾ ಸ್ತೋತ್ರ'--

ಸರ್ವೇಷು ದೇಶಕಾಲೇಷು
ಸರ್ವಾವಸ್ಥಾಸು ಚಾಚ್ಯುತ
ಕಿಂಕರೋ-ಸ್ಮಿ ಹೃಷೀಕೇಶ
ಭೂಯೋ ಭೂಯೋ-ಸ್ಮಿ ಕಿಂಕರಃ

--ಯಾವ ದೇಶವೇ ಆಗಲಿ, ಯಾವ ಕಾಲವೇ ಆಗಲಿ, ಎಂತಹ ಪರಿಸ್ಥಿತಿಯೇ



ಆಗಲಿ ಓ ಅಚ್ಯುತ! ಹೃಷಿಕೇಶ! ನಾನು ಎಂದೆಂದಿಗೂ ನಿನ್ನ ಕಿಂಕರನಾಗಿರುವೆನು ಎಂದು ಭಕ್ತನು ಪ್ರಾರ್ಥಿಸಿರುವಂತೆ ನನಗೂ ನಿನ್ನ ಅನವರತ ಕೈಂಕರ್ಯವು ಇರಲೆಂದು ಪರಮಾತ್ಮನನ್ನು ಬೇಡಿಕೊಂಡಿರುವುದೇ ಭಕ್ತನ -- ಪರಮ ಜ್ಞಾನ, ಪರಮ ವೈರಾಗ್ಯಗಳನ್ನು ಸೂಚಿಸುತ್ತದೆ.

ಇತಿ ಶ್ರೀವೇಂಕಟೇಶ ಪ್ರಪತ್ತಿಯು ಮುಗಿಯಿತು.



(16ನೇ ಪುಟದಿಂದ)

ಕಾಣದಂತಾಯಿತು. ಆಗ ವ್ಯಾಸರಾಯರು ಮುಖ್ಯ ಪ್ರಾಣನಿಗೆ ಮಾಲಾಕಾರದ ಕಪಿಬಂಧ ಹೆಣೆದು ಷಟ್ಕೋಣಯಂತ್ರದ ಮಧ್ಯದಲ್ಲಿ ಹನುಮಂತನನ್ನು ಪ್ರತಿಷ್ಠಿಸಿ ಯಂತ್ರೋದ್ಧಾರಕ ಪ್ರಾಣದೇವರೆಂದು ಕರೆದರು. ಈ ವಿಷಯವನ್ನು ಗುರು ಜಗನ್ನಾಥದಾಸರು ಈ ರೀತಿ ವರ್ಣಿಸಿದ್ದಾರೆ.

ಕೋಣಪಟ್ಟದ ಮಧ್ಯದಲಿ ನಿಜ
ಪ್ರಾಣದೇವನ ನಿಲಿಸಿ ವಲಯದಿ
ಮಾಣದಲೆ ಕಪಿಕಟಕ ಬಂಧಿಸಿ
ಬೀಜವರಣಗಳ
ಜಾಣತನದಲಿ ಬರೆದು ತ್ರಿಜಗ--
ತ್ರಾಣನಲ್ಲೇ ನಿಲಿಸಿ ಪೂಜಿಸಿ
ಕ್ಷೋಣಿ ತಳದಲಿ ಕರೆದ ಯಂತ್ರೋದ್ಧಾರ
ನಾಮದಲಿ

ಸಾಳುವ ನರಸಿಂಹನ ನಂತರ ಅವನ ಮಗ ತಿಮ್ಮರಾಯನೆಂಬ ಹೆಸರಿನ ಭುಜಬಲರಾಯನೂ, ಅವನ ನಂತರ ನರಸನಾಯಕನೂ ದೊರೆಗಳಾದರು. ನರಸನಾಯಕನಿಗೆ ಮೂವರು ಪತ್ನಿಯರಿದ್ದರು. ಇವರಲ್ಲಿ ಹಿರಿಯರಾಣಿ ತಿಪ್ಪಾಂಬಿಕೆಯಲ್ಲಿ ವೀರನರಸಿಂಹನೂ, ನಾಗಲಾಂಬಿಕೆಯಲ್ಲಿ ಕೃಷ್ಣದೇವರಾಯನೂ, ಓಬಾಂಬಿಕೆಯಲ್ಲಿ ಅಚ್ಯುತರಾಯ ಮತ್ತು ರಂಗರಾಯರೆಂಬ ಮಕ್ಕಳು ಇದ್ದರು. ತಂದೆಯ ನಂತರ ತೌಳವ ವಂಶದ ವೀರನರಸಿಂಹನು ಪಟ್ಟಕ್ಕೆ ಬಂದನು.

ಅವನು ಕಾಹಿಲೆಯಿಂದ ತೀರಿಕೊಳ್ಳಲು ತಿಮ್ಮರಸನೆಂಬ ಮಂತ್ರಿಯ ಸಹಕಾರದಿಂದ ಕೃಷ್ಣದೇವರಾಯನು ಸಿಂಹಾಸನವನ್ನೇರಿದನು. ಸಮರ್ಥನೂ, ದಕ್ಷನೂ, ಧರ್ಮಿಷ್ಟನೂ ಆಗಿದ್ದ ಅವನಿಗೆ ವ್ಯಾಸರಾಯರು ಬೆಂಬಲವಾಗಿ ನಿಂತು ವಿಜಯನಗರ ಇತಿಹಾಸದಲ್ಲಿ ಸುವರ್ಣ ಅಧ್ಯಾಯವನ್ನು ನಿರ್ಮಿಸಲು ಕಾರಣರಾದರು.

ಕ್ರಿ. ಶ. ೧೫೦೯ ರಲ್ಲಿ ವಿಜಯನಗರದ ರತ್ನಸಿಂಹಾಸನವನ್ನೇರಿದ ಕೃಷ್ಣದೇವರಾಯನು ತನ್ನ ಅಭ್ಯುದಯಕ್ಕೆ ಕಾರಣರಾದ ಶ್ರೀ ವ್ಯಾಸರಾಯರನ್ನು ರಾಜಗುರುಗಳನ್ನಾಗಿ ಮಾಡಿ ತನ್ನ ಕೃತಜ್ಞತೆಯನ್ನು ಸೂಚಿಸಿದನು.

ಕೃಷ್ಣದೇವರಾಯನು ವ್ಯಾಸರಾಯರಿಗೆ ತಕ್ಕಂಥ ಒಂದು ಭವ್ಯ ಭವನವನ್ನು ಕಟ್ಟಿಸಿ ಅದಕ್ಕೆ ಸೇರಿಕೊಂಡಂತೆ ಪಾಕಶಾಲೆ, ಸಭಾಭವನ, ಗ್ರಂಥಭಾಂಡಾರ ಮತ್ತು ಅತಿಥಿಗೃಹಗಳನ್ನು ನಿರ್ಮಿಸಿಕೊಟ್ಟನು. ಸಾಮ್ರಾಟನಿಂದ ಚಕ್ರತೀರ್ಥದ ಬಳಿ ವಿಶಾಲವಾದ ಪ್ರದೇಶದಲ್ಲಿ ನಿರ್ಮಿತವಾದ ಈ ಭವನಕ್ಕೆ ಲೋಕಪಾವನ (ವಿಶ್ವಪಾವನ) ಮಠವೆಂದು ನಾಮಕರಣ ಮಾಡಿದ್ದರು. ಕಾಲಕ್ರಮದಲ್ಲಿ ಈ ಪೀಠವು ಹತ್ತುಸಾವಿರ ವಿದ್ಯಾರ್ಥಿಗಳು ಅಭ್ಯಾಸಮಾಡುವ ಬೃಹತ್ ವಿದ್ಯಾಪೀಠವಾಗಿ ಬೆಳೆಯಿತು. ಅಲ್ಲಿ ವಿದ್ಯಾಭ್ಯಾಸ ಮಾಡಲು ದೇಶವಿದೇಶಗಳಿಂದ ವಿದ್ಯಾರ್ಥಿಗಳು ಬರುತ್ತಿದ್ದರು. ವಿಜಯನಗರಕ್ಕೆ ಭೇಟಿನೀಡಿದ ವಿದೇಶಿ ಪ್ರವಾಸಿ ನೂನಿಜನು ತನ್ನ ವರದಿಯಲ್ಲಿ ವ್ಯಾಸರಾಯರನ್ನು ಕುರಿತು "ಬಿಸನಗರದ ದೊರೆಯು ಪ್ರತಿದಿನವೂ ಅವಿವಾಹಿತನೂ, ಹೆಣ್ಣಿನ ಸಂಪರ್ಕರಹಿತನೂ ಆದ ಒಬ್ಬ ಜ್ಞಾನಿಯಾದ ಬ್ರಾಹ್ಮಣನ ಉಪದೇಶವನ್ನು ಕೇಳುತ್ತಾನೆ." (Every day he (The king af Bisnaga) hears the preaching of a learned Brahmin who never married nor touched a woman) ಎಂದು ಬರೆದಿದ್ದಾನೆ. ಒಮ್ಮೆ ಇವನು ಸರ್ವಜ್ಞ ವಿದ್ಯಾಪೀಠದ ಘಟಕೋತ್ಸವದ ಒಂದು ಮೆರವಣಿಗೆಯನ್ನು ನೋಡಿದ್ದನಂತೆ. ಅದು ಒಂದು ಮೈಲಿ ಉದ್ದವಿದ್ದ ಮೆರವಣಿಗೆ. ಎಲ್ಲಕ್ಕೂ ಮೊದಲು ಒಂದು ಸುವರ್ಣಕ್ಕೆ ರತ್ನಗಳನ್ನು ಹೊಂದಿಸಿ ಮಾಡಿದ ಪಲ್ಲಕ್ಕಿಯಲ್ಲಿ ಒಬ್ಬ ಯತಿಗಳು ಹೋಗುತ್ತಿರುವುದನ್ನು ಸಹ ನೋಡಿದ್ದನಂತೆ.

ವಿಜಯನಗರಕ್ಕೆ ಭೆಟ್ಟಿನೀಡಿದ್ದ ವಲ್ಲಭಾಚಾರ್ಯರೂ, ನವದ್ವೀಪದಿಂದ ಬಂದಿದ್ದ ಚೈತನ್ಯನೂ ವ್ಯಾಸರಾಯರ ವಿದ್ಯಾಪೀಠವನ್ನು ಸಂದರ್ಶಿಸಿದ್ದರೆಂದು ಹೇಳುತ್ತಾರೆ.

ಒಮ್ಮೆ ಕೃಷ್ಣದೇವರಾಯನು ಅನೇಕ ಕಾರಣಗಳಿಂದಾಗಿ ಉದಯಗಿರಿಯ ಮೇಲೆ ದಂಡಯಾತ್ರೆ ಮಾಡಿ ಜಯಿಸಿ, ಅಲ್ಲಿನ ಸುಪ್ರಸಿದ್ಧ ಕೃಷ್ಣಸ್ವಾಮಿ ದೇವಾಲಯದಲ್ಲಿದ್ದ ಅತ್ಯಂತ ಸುಂದರ ವಿಗ್ರಹವಾದ ಶ್ರೀಕೃಷ್ಣನ ವಿಗ್ರಹವನ್ನು ತೆಗೆದುಕೊಂಡು ಬಂದು ವ್ಯಾಸರಾಯರಿಗೆ ಅರ್ಪಿಸಿದರು.

ಉದಯಗಿರಿಯಿಂದ ವಿಜಯದ ಕುರುಹಾಗಿ ತಂದ ಕೃಷ್ಣನ ವಿಗ್ರಹಕ್ಕೆ ಸುಂದರವಾದ ಒಂದು ಮಂದಿರವನ್ನು ನಿರ್ಮಾಣ ಮಾಡಿಸಿದನು. ಪಾಂಚರಾತ್ರದಲ್ಲಿನ ತಂತ್ರಸಾರೋಕ್ತ ಪದ್ಧತಿಯಂತೆ ಕೃಷ್ಣನ ವಿಗ್ರಹವನ್ನು ಮಂದಿರದಲ್ಲಿ ಪ್ರತಿಷ್ಠಿಸಿದರು.

ವ್ಯಾಸರಾಯರಿಗೆ ತಮ್ಮ ಆರಾಧ್ಯದೈವ ಕೃಷ್ಣಮೂರ್ತಿಯು ಉದಯಗಿರಿಯಿಂದ ವಿಜಯನಗರಕ್ಕೆ ಬಂದು ದರ್ಶನಕೊಟ್ಟದ್ದು ಮಾತ್ರವಲ್ಲದೆ, ತಮ್ಮಿಂದ ನಿತ್ಯಪೂಜೆ ಕೈಗೊಳ್ಳಲು ನಿಂತುದಕ್ಕೆ ತುಂಬಾ ಸಂತೋಷವಾಯಿತು.

ವ್ಯಾಸರಾಯರು ಆ ಸ್ವಾಮಿಯನ್ನು ಕುರಿತು ಒಂದು ದೇವರನಾಮವನ್ನು ರಚಿಸಿ ಹಾಡಿದವರು.

ಕಂದನಿಗೆ ಕಾಲಿಲ್ಲವಮ್ಮ ಪುಟ್ಟ -- ಪ --
ದಂದಿಂದ ಈ ಅಂದೆಗಾಲು ಬಿಡದಮ್ಮ
-- ಅ.ಪ. --

ಮಳೆಹೊಳೆ ಕತ್ತಲೊಳು
ತರಳ ಮಗ ದೇವರಿದನೊ
ಕಳೆಯುಳ್ಳ ಮುಖಕೀಗ
ಗ್ರಹ ಸೋಕಿತೋ
ಎಳೆಯ ದೆಳದಿಂಗಳೊಳೆತ್ತಣ ದೃಷ್ಟಿ ತಾಕಿತೊ
ಲಲನೆ ಮಿಾಸಲಹಾಲು
ಮರೆದೆರೆದಪರಿಯೋ --1--

ದೆಣ್ಣೆಯನು ಮೆಲ್ಲುತ
ದೇವರಿ ಬಾಯಾರಿದನೊ
ಉಣ್ಣೆ ಪೂತನಿ ಮೊಲೆಯ
ವಿಷ ಸೋಂಕಿತೋ
ಅಣ್ಣ ಪಾಪಿಯ ಭಯಕೆ
ಅಂದೆಕಾಲಿಟ್ಟನೋ
ಹೆಣ್ಣುದೈತೇಯರ ಕಾಲಲಿ
ಬಂದ ಸರಕೊ --2--

ಧುರವಿಜಯ ಶ್ರೀ ಕೃಷ್ಣರಾಯನಿಗೆ ನಿಮ್ಮ
ಹರದೇರಂದವ ತೋರಬಂದ ಪರಿಯೋ
ಧರೆಗಧಿಕ ವಿದ್ಯನಗರ
ಒಳಿತೆಂದು ಉದಯ
ಗಿರಿಯಿಂದ ಬಂದ
ಮುದ್ದು ಬಾಲಕೃಷ್ಣಗೆ --3--

ಅಂದು ಕೃಷ್ಣದೇವರಾಯನು ಕಟ್ಟಿಸಿದ (೧೫೧೩) ಶ್ರೀಕೃಷ್ಣಮಂದಿರವು ಇಂದು ದುರ್ದೈವದಿಂದ ಹಂಪೆಯಲ್ಲಿರುವ ಭಗ್ನದೇಗುಲಗಳಲ್ಲಿ ಒಂದಾಗಿದೆ. ವಿಗ್ರಹವು ಮುಸಲ್ಮಾನರ ಧಾಳಿಯಲ್ಲಿ ಸಿಕ್ಕಿ ಭಗ್ನವಾಯಿತು. ಮುದ್ದಾದ ಈ ಪುಟ್ಟ ಕೃಷ್ಣನ ವಿಗ್ರಹವನ್ನು ಇಂದಿಗೂ ಮದರಾಸಿನ ಪ್ರಾಚ್ಯವಸ್ತು ಸಂಗ್ರಹಶಾಲೆಯಲ್ಲಿ (ಮ್ಯೂಜಿಯಂ) ನೋಡಬಹುದು.

ಇದಾದ ಮೇಲೆ ಅಪರೋಕ್ಷಜ್ಞಾನಿಗಳಾದ ವ್ಯಾಸರಾಯರಿಗೆ ಮೇಲಿಂದ ಮೇಲೆ ದುಃಸ್ವಪ್ನಗಳೂ ಬೀಳಹತ್ತಿದವು. ಅದಕ್ಕೆ ತಕ್ಕಂತೆ ಆಕಾಶದಲ್ಲಿ ಧೂಮಕೇತುವೊಂದು ಕಾಣಿಸಿಕೊಂಡಿತು. ಧೂಮಕೇತು ಉದಯವಾದರೆ ಸಾಮ್ರಾಟರಿಗೆ ಕೇಡೆಂದು ಜನಸಾಮಾನ್ಯರಲ್ಲಿ ಬಂದಿರುವ ಒಂದು ನಂಬಿಕೆ.

ರಾಯನ ಜನ್ಮ ಕುಂಡಲಿಯನ್ನು ಪರೀಕ್ಷೆಗೆ ಒಪ್ಪಿಸಿದಾಗ ರಾಯನಿಗೆ ದಿನಾಂಕ ಕ್ರಿ.ಶ. ೩೦--೧--೧೫೨೧ ಅಂದರೆ ವಿಕ್ರಮ ಸಂವತ್ಸರ ಪುಷ್ಯಬಹುಳ ಅಮಾವಾಸ್ಯೆಯ ದಿನ ಕುಹುಯೋಗ ಬರಲಿದೆ ಎಂದು ತಿಳಿಯಿತು. ಕೃಷ್ಣದೇವರಾಯನು ಗುರುಗಳಾದ ಶ್ರೀ ವ್ಯಾಸರಾಯರನ್ನು ಮೊರೆಹೊಕ್ಕನು. ಹರಿಚಿತ್ತವನ್ನು ನೆನೆದ ವ್ಯಾಸರಾಯರು ಕೃಷ್ಣದೇವರಾಯರನ್ನು ಆಶೀರ್ವದಿಸಿದರು. ಕುಹುಯೋಗ ಘಟಿಸುವ ದಿನದಂದು ಸ್ತುತಿಪಾಠಕರು ಪರಾಕು ಹೇಳುತ್ತಿರಲು ವ್ಯಾಸರಾಯರು ವಿದ್ಯಾನಗರದ ರತ್ನಸಿಂಹಾಸನದ ಮುಂದೆ ನಿಂತು ನಮಸ್ಕಾರ ಮಾಡಿ ತಾವು ಹೊದ್ದಿದ್ದ ಕಾವೀವಸ್ತ್ರವನ್ನು ಅದರ ಮೇಲೆ ಎಸೆದರು. ಸಾಮ್ರಾಟನೂ, ಆಸ್ಥಾನಿಕರೂ ಬೆರಗಾಗಿ ನೋಡುತ್ತಿರಲು ಭಯಂಕರ ಆಸ್ಫೋಟನೆಯೊಂದಿಗೆ ಸಿಂಹಾಸನದ ಮೇಲಿದ್ದ ವಸ್ತ್ರವು ಸಿಡಿದು ನೆಲಕ್ಕೆ ಬಿದ್ದಿತು. ಕೂಡಲೇ ಅದು ಧಗಧಗನೆ ಉರಿಯಲಾರಂಭಿಸಿತು. ಅದರೊಡನೆ ಸರ್ಪಾಕಾರ ತಳೆದು ಸೆಣಸಲು ಬಂದ ದುಷ್ಟಗ್ರಹಪೀಡೆ ಆ ಬೆಂಕಿಯಲ್ಲಿ ಸುಟ್ಟು ಬೂದಿಯಾಯಿತು. ವ್ಯಾಸರಾಯರು ತಮ್ಮ ಮುಷ್ಟಿಯಲ್ಲಿ ಶ್ರೀ ಗೋಪಾಲಕೃಷ್ಣನ ವಿಗ್ರಹವನ್ನು ಹಿಡಿದು ಕರ್ನಾಟಕ ರತ್ನಸಿಂಹಾಸನದ ಮೇಲೆ ಮೂರೂಮುಕ್ಕಾಲು ಘಳಿಗೆ ಮಂಡಿಸಿ (ಸುಮಾರು ಒಂದೂವರೆ ಘಂಟೆ) ರಾಜ್ಯವಾಳಿದರು. ಈ ಘಟನೆಯ ಜ್ಞಾಪಕಾರ್ಥವಾಗಿ ಈಗಲೂ ವ್ಯಾಸರಾಯ ಮಠದ ಶ್ರೀಪಾದಂಗಳವರು ಪ್ರತಿದಿನ ಸಿಂಹಾಸಾರೂಢರಾಗಿ ದರ್ಬಾರು ನಡೆಸುತ್ತಾರೆ. ಈ ವಿಷಯವನ್ನು ವ್ಯಾಸರಾಯರ ಶಿಷ್ಯರಾದ ಪುರಂದರದಾಸರು ಒಂದು ಸುಳಾದಿಯಲ್ಲಿ ಹೀಗೆ ವರ್ಣಿಸಿರುವರು.

ಶೇಷಾವೇಶ ಪ್ರಹ್ಲಾದನವತಾರವೆನಿಸಿದೆ
ವ್ಯಾಸರಾಯನೆಂದೂ ಪೆಸರು ನಿನಗಂದಂತೆ
ದೇಶಾಧಿಪಗೆ ಬಂದ ಕುಹುಯೋಗವನು ನೂಕಿ
ನೀ ಸಿಂಹಾಸನವೇರಿ ಮೆರೆದೆ ಜಗವರಿಯೆ
ವ್ಯಾಸಾಬ್ಧಿಯನು ಬಿಗಿಸಿ ಕಾಶಿ ದೇಶದೊಳಗೆಲ್ಲ
ಭಾಸುರ ಕೀರ್ತಿಯನು ಪಡದೆ
ನೀನು ಗುರುರಾಯ
ವಾಸುದೇವ ಪುರಂದರ ವಿಠಲನ್ನ ದಾಸರೊಳು
ಲೇಶ ನಿನ್ನಂತೆ ವೆಗ್ಗಳರ ಕಾಣೆನು ನಾನು

ಕುಹುಯೋಗದಿಂದ ತನ್ನನ್ನು ರಕ್ಷಿಸಿದ ವ್ಯಾಸರಾಯರನ್ನು ಕೃಷ್ಣದೇವರಾಯನು ತನ್ನ ಪಾಲಿನ ದೇವತೆ ಎಂದು ತಿಳಿದು ಅವರನ್ನು ಮಾರನೆಯದಿನ ರತ್ನಸಿಂಹಾಸನದಲ್ಲಿ ಕೂಡಿಸಿ ಅನರ್ಘ್ಯವಾದ ಮುತ್ತುರತ್ನಗಳಿಂದ ಅಭಿಷೇಕ ಮಾಡಿ ತನ್ನ ಕೃತಜ್ಞತೆಯನ್ನು ಸೂಚಿಸಿದನು. ಅಲ್ಲದೆ ಅವರಿಗೆ ವ್ಯಾಸಸಮುದ್ರವೆಂಬ ಗ್ರಾಮವನ್ನು ಧಾರೆ ಎರೆದನು.

ಈ ರೀತಿ ವ್ಯಾಸರಾಯರು ಕೃಷ್ಣದೇವರಾಯನಿಂದ ಮಾನ್ಯರಾಗಿ ಅನೇಕ ಗ್ರಂಥಗಳನ್ನು ರಚಿಸಿ, ಅನೇಕ ಪದ ಪದ್ಯ ಸುಳಾದಿ ಉಗಾಭೋಗಗಳನ್ನು ರಚಿಸಿ ಪುರಂದರದಾಸರು, ಕನಕದಾಸರು, ವಾದಿರಾಜರು, ವಿಜಯಿಂದ್ರರಂಥಾ ಉತ್ತಮ ವ್ಯಕ್ತಿಗಳನ್ನು ತಯಾರು ಮಾಡಿ ಮೆರೆದರು. ಶ್ರೀ ವ್ಯಾಸರಾಯರು ಕೃಷ್ಣದೇವರಾಯನಿಂದ ಸೇವಿತರಾದ ಮಹಾಮಹಿಮಾನ್ವಿತ ದಿವ್ಯಪುರುಷರೆಂಬುದಕ್ಕೆ ಕ್ರಿ. ಶ. ೧೫೨೭ರ ಒಂದು ಶಾಸನವು ಸಾಕ್ಷಿಯಾಗಿದೆ. ಶಾಸನದಲ್ಲಿ ವ್ಯಾಸರಾಯಸ್ವಾಮಿಗಳನ್ನು ಹೀಗೆ ಸ್ತುತಿಸಲಾಗಿದೆ.

ನಿಗಮಾಗ ನಿರ್ಣೀತ
ನಿರ್ಜರಾಧೀಶ ಮಂತ್ರಿಣೇ
ನೃಪೇಂದ್ರ ಮಕುಟರತ್ನ
ನೀರಾಜಿತ ನಿಜಾಂಘ್ರಯೇ
ನಿರಹಂಕಾರ ಚಿತ್ತಾಯ
ನೀತಿ ಮಾರ್ಗೋಪದೇಶಿನೇ
ಶೇಷಾಯ ನರವೇಷಾಯ
ಶಿಕ್ಷಿತಾಂತರ ವೈರಿಣೇ
ಪುರಾಣ ಪುರುಷ ಧ್ಯಾನ
ಪುಷ್ಯತ್ಪುಲಿಕ ಮೂರ್ತಯೇ
ಮಧ್ವಾಚಾರ್ಯ ಮತಾಂಭೋಜ
ಮಾರ್ತಾಂಡಾಯಿತ ತೇಜಸೆ
ಬ್ರಹ್ಮಣ್ಯತೀರ್ಥಶಿಷ್ಯಾಯ
ಬ್ರಹ್ಮನಿರ್ಮಲಮೂರ್ತಯೇ
ವ್ಯಾಸತೀರ್ಥಯತೀಂದ್ರಾಯ
ವಿದ್ವದಿಂದೀವರೇಂದವೇ

ಇಂದಿನ ಚಿತ್ತೂರು ಜಿಲ್ಲೆ ಮದನಪಲ್ಲಿ ತಾಲೂಕಿನ ಕಂದಕೂರು ಗ್ರಾಮವನ್ನು ಸಾಮ್ರಾಟ್ ಕೃಷ್ಣದೇವರಾಯನು ಉತ್ಕಲ ವಿಜಯದ ಸ್ಮರಣೆಗಾಗಿ ವ್ಯಾಸರಾಯಸ್ವಾಮಿಗಳಿಗೆ ದತ್ತಿಯಾಗಿ ಬಿಟ್ಟಿದ್ದ. ರಾಯರ ಪ್ರದೇಶವೆಂದು ಪ್ರಸಿದ್ಧವಾದ ಈ ಪ್ರದೇಶದಲ್ಲಿ ಮಳೆ ಕಡಿಮೆ. ರೈತರು ಸದಾ ಅನಿಶ್ಚಿತ ಕ್ಷಾಮಡಾಮರಗಳಿಗೆ ತುತ್ತಾಗುತ್ತಿದ್ದರು. ವ್ಯಾಸರಾಯರು ಜನರ ಬಡತನವನ್ನು ನೋಡಿ ಮನ ಕರಗಿದರು. ಅವರು ಅಲ್ಲಿ ಒಂದು ಜಲಾಶಯವನ್ನು ನಿರ್ಮಾಣ ಮಾಡಬೇಕೆಂದು ಯೋಚಿಸಿದರು. ಕೃಷ್ಣದೇವರಾಯನು ಗುರುಗಳ ಹೆಸರಿನಲ್ಲಿ "ವ್ಯಾಸಸಮುದ್ರ"ವೆಂಬ ಕೆರೆಯನ್ನು ಕಟ್ಟಿಸಿದನು. ಕೆರೆಯನಿರ್ಮಾಣ ಕಾರ್ಯ ಮುಗಿಯಿತು. ತೂಬಿನ ಕೆಲಸ ಮಾತ್ರಮುಗಿಯಬೇಕಾಗಿತ್ತು. ಆದರ ತೂಬಿನಿಂದ ನೀರು ಹರಿಯಲು ಬಂದು ದೊಡ್ಡ ಪ್ರತಿಬಂಧಕವಿತ್ತು. ಅಲ್ಲಿ ಅಡ್ಡವಾಗಿ ದೊಡ್ಡದೊಂದು ಬಂಡೆಗಲ್ಲು ಇತ್ತು. ಈ ಬಂಡೆ ಕಲ್ಲನ್ನು ವ್ಯಾಸರಾಯರು ತಮ್ಮ ಶಿಷ್ಯನಾದ ಕನಕದಾಸನಿಗೆ ಒಲಿದು ಬಂದು ಯಮಧರ್ಮರಾಜನ ಕೋಣದ ಕಡೆಯಿಂದ ಸೀಳಿಸಿ ಯಥೇಷ್ಟವಾಗಿ ನೀರು ಹರಿಯುವಂತೆ ಮಾಡಿದರು. ಇಂದುಗೂ ಈ ವ್ಯಾಸಸಮುದ್ರವನ್ನು ಮದನಪಲ್ಲಿಯಲ್ಲಿ ನೋಡಬಹುದು.

ವ್ಯಾಸರಾಯರಿಗೆ ತೊಂಬತ್ತೆರಡನೆಯ ವರ್ಷ ಆರಂಭವಾಯಿತು. ಅವರು ಇಚ್ಛಾಮರಣಿಗಳು. ಅಪರೋಕ್ಷ ಜ್ಞಾನಿಗಳಾದ ಅವರಿಗೆ ತಮ್ಮ ಇಹ ಲೋಕದ ಕಾರ್ಯ ಮುಗಿದುದು ತಿಳಿದಿತ್ತು. ತಮ್ಮ ಸ್ವಸ್ಥಾನಕ್ಕೆ ತೆರಳಲು ಉತ್ಸುಕವಾಗಿದ್ದರು.

ಕ್ರಿ. ಶ. ೧೫೩೯ ನೇ ಹೇವಿಳಂಬಿ ಸಂವತ್ಸರ ಆಗಮಿಸಿತು. ತಮ್ಮ ಪೂರ್ವಾಶ್ರಮದ ಬಂಧುವೂ, ಕಂಚಿವಿದ್ಯಾಪೀಠಕ್ಕೆ ಕುಲಪತಿಗಳೂ ಆಗಿದ್ದ ಶ್ರೀನಿವಾಸತೀರ್ಥರನ್ನು ಕರೆಸಿಕೊಂಡು, ಅವರಿಗೆ ಸಂಸ್ಥಾನದ ಜವಾಬ್ದಾರಿಯನ್ನು ಒಪ್ಪಿಸಿದರು. ಶ್ರೀ ಮಧ್ವಾಚಾರ್ಯರ ಸಾಕ್ಷಾತ್ ಶಿಷ್ಯರಾದ ಶ್ರೀಪದ್ಮನಾಭತೀರ್ಥರು ಬೃಂದಾವನಸ್ಥರಾದ ಆನೆಗೊಂದಿಯ ಸಮೀಪದ ಬೃಂದಾವನಗಳ ನಡುಗಡ್ಡೆಯಲ್ಲಿ ತಮ್ಮ ಪಾರ್ಥಿವ ದೇಹವನ್ನು ಬಿಡಲು ನಿಶ್ಚಯಿಸಿದರು. ಆ ಸಮಯಕ್ಕೆಲ್ಲಾ ಕೃಷ್ಣದೇವರಾಯನು ದಿವಂಗತವಾಗಿ ಅಚ್ಯುತರಾಯನು ಪಟ್ಟಕ್ಕೆ ಬಂದಿದ್ದನು. ಸಾಮ್ರಾಟ್ ಅಚ್ಯುತರಾಯನು ವ್ಯಾಸರಾಯರಿಗೆ ಬೇಕಾದ ಸೌಕರ್ಯಗಳನ್ನು ಅಲ್ಲಿ ಕಲ್ಪಿಸಿಕೊಟ್ಟನು.

ಫಾಲ್ಗುಣ ಬಹುಳ ಚೌತಿಯದಿನ ವ್ಯಾಸರಾಯರು ಬ್ರಾಹ್ಮೀಮುಹೂರ್ತದಲ್ಲಿ ಎದ್ದು, ತುಂಗಭದ್ರೆಯ ಪವಿತ್ರೋದಕದಲ್ಲಿ ಸ್ನಾನಮಾಡಿ, ಶ್ರೀ ಪದ್ಮನಾಭತೀರ್ಥರ ಬೃಂದಾವನದ ಎದುರಿಗೆ ಪದ್ಮಾಸನ ಹಾಕಿ ಕುಳಿತು, ಪ್ರಣವಮಂತ್ರ ಜಪಿಸುತ್ತಾ ಆರಾಧ್ಯದೈವ ಸಿರಿ ಕೃಷ್ಣನನ್ನು ಚಿತ್ತದಲ್ಲಿ ನಿಲ್ಲಿಸಿದರು. ದೃಷ್ಟಿಯನ್ನು ಭ್ರೂಮಧ್ಯದಿಂದ ನಾಸಿಕಾಗ್ರದಲ್ಲಿ ನಿಲ್ಲಿಸಿ ಯೋಗದಿಂದ ಶ್ವಾಸ ಬಂಧಿಸಿದರು. ಶಿಷ್ಯರು ಜಯಕಾರ ಮಾಡುತ್ತಿರಲು ವ್ಯಾಸರಾಯರು ತಮ್ಮ ಪ್ರಾಣವನ್ನು ಬ್ರಹ್ಮರಂಧ್ರದ ಮೂಲಕ ಊರ್ಧ್ವಮುಖವಾಗಿ ಹೊರಗೆ ಬಿಟ್ಟರು.



# ಸೋದೆಯ ವಾದಿರಾಜರು

---ಕು. ರ. ನರಸಿಂಹನ್.

ಕನ್ನಡ ನಾಡಿನ ಭಕ್ತಿ ಪರಂಪರೆಯ ಪ್ರವರ್ತಕರಾಗಿ ಬಂದವರಲ್ಲಿ ಹರಿದಾಸರು ಪ್ರಮುಖರಾದವರಾಗಿದ್ದಾರೆ. ಮಧ್ವಾಚಾರ್ಯರು ಪ್ರತಿಪಾದಿಸಿದ ದ್ವೈತ ಸಿದ್ಧಾಂತದ ತಳಹದಿಯ ಮೇಲೆ ಈ ಹರಿದಾಸರು ನಾಡಿನ ಉದ್ಧಗಲಕ್ಕೆ ಹರಿದಾಸ ಪಂಥವನ್ನು ಬೆಳಗಿದವರಾಗಿದ್ದಾರೆ. ಕರ್ನಾಟಕದ ಮಟ್ಟಿಗೆ ಹೇಳುವುದಾದರೆ ಇಂತಹ ಸಂದರ್ಭ ಒದಗಿ ಬಂದದ್ದು ಹದಿನೈದನೆ ಶತಮಾನದಿಂದ ಮೊದಲಾಗಿ ಹದಿನೇಳನೆ ಶತಮಾನದವರೆಗೆಂದು ಹೇಳುವುದರಲ್ಲಿ ಅರ್ಥವಿಲ್ಲದಿಲ್ಲ. ಈ ಕಾಲದಲ್ಲಿ ಬಾಳಿ ತಮ್ಮ ಜೀವನವನ್ನು ವೈದಿಕ ಸಂಸ್ಕೃತಿಯ ಪ್ರಸಾರಕ್ಕೆ ಮುಡುಪಾಗಿಟ್ಟವರಲ್ಲಿ ಶ್ರೀಪಾದರಾಜ -- ವ್ಯಾಸರಾಜ -- ಕನಕ -- ಪುರಂದರ -- ವಾದಿರಾಜ -- ವೆಂಕಟ -- ವಿಜಯಿಾಂದ್ರ ಮುಂತಾದ ದಾಸಶ್ರೇಷ್ಠರನ್ನು ಕವಿವೃಷಭರನ್ನು ಮರೆಯುವಹಾಗಿಲ್ಲ. ದಾಸಶ್ರೇಷ್ಠರ ಹರಿದಾಸ ಸಾಹಿತ್ಯ ಸುಧಾವಾಹಿನಿ ಪಾಮರರಿಗಷ್ಟೆ ಅಲ್ಲದೆ ಪಂಡಿತ ಶ್ರೇಷ್ಠರಿಗೂ ವರದಾನದಂತೆ ಪರಿಣಮಿಸಿತು. ಅಷ್ಟೇ ಅಲ್ಲದೆ ಕರ್ನಾಟಕ ಹೃದಯಸಾಮ್ರಾಜ್ಯದಲ್ಲಿ ಹರಡಿ, ವೇದಾಂತ ಸಾಮ್ರಾಜ್ಯವನ್ನು ನಿರ್ಮಿಸಿತೆಂದು ಹೇಳಬಹುದು. ಭಾರತೀಯ ಸಂಸ್ಕೃತಿಗೆ ಭದ್ರವಾದ ಬುನಾದಿಯನ್ನು ಹಾಕಿಕೊಟ್ಟ ಈ ಹರಿದಾಸ ಪಂಥಕ್ಕೆ ಸೇರಿದ ಶ್ರೀವಾದಿರಾಜರು ನೆಲೆನಿಂತ ಸ್ಥಳವೇ, ಉತ್ತರ ಕನ್ನಡಜಿಲ್ಲೆಯ ಶಿರಸಿ ತಾಲ್ಲೂಕಿನಲ್ಲಿರುವ ಸೋಂದೆ ಎಂಬ ಪ್ರಸಿದ್ಧ ಯಾತ್ರಾಸ್ಥಳವಾಗಿ, ಇತಿಹಾಸದ ವೈಭವತೆಯಿಂದ ಮೆರೆಯುತ್ತಿದೆ.

ಕರಾವಳಿಯ ಸೊಬಗನ್ನೂ ಜಲಪಾತದ ಸೌಂದರ್ಯವನ್ನೂ ಕರ್ನಾಟಕಕ್ಕೆ ನೀಡಿರುವ ಉತ್ತರ ಕನ್ನಡ ಜಿಲ್ಲೆಯಲ್ಲಿರುವ ಸೋಂದೆಯು ಶಿರಸಿಯಿಂದ, ಯಲ್ಲಾಪುರ ಮಾರ್ಗದಲ್ಲಿ ೩೫ ಕಿ.ಮಿಾ. ದೂರದಲ್ಲಿದೆ. ಇದನ್ನು ಸ್ವಾದಿ, ಸೋಂದೆ, ಸೋಣಿಕರೆ, ಸಂದಾಪುರ ಎಂಬ ಹೆಸರುಗಳಿಂದಲೂ ಕರೆಯಲಾಗಿದೆ. ಮೌರ್ಯರ ಕಾಲದಿಂದ ತೊಡಗಿ ಬ್ರಿಟಿಷರ ಕಾಲದ ವರೆಗೂ ಹರಡಿನಿಂತಿರುವ ಇತಿಹಾಸದ ಕಾಲಚಕ್ರದಲ್ಲಿ ಸೋಂದೆಯು ವೈಭವದಿಂದ ಆಳಿದ ಪುಟ್ಟ ಅರಸೊತ್ತಿಗೆಯೊಂದರ ರಾಜಧಾನಿಯಾಗಿ ಮೆರೆದ ಪರಂಪರೆಗೆ ಸೇರುವುದಾಗಿದೆ. ಹದಿನಾರನೆ ಶತಮಾನ ಮಧ್ಯಭಾಗದಿಂದ ಹದಿನೆಂಟನೆ ಶತಮಾನದ ಮೂರನೆ ಪಾದದವರೆಗೆ, ಆರಂಭದಲ್ಲಿ ವಿಜಯನಗರದ ಅರಸರ ಮುಂದೆ ಕೆಳದಿ ಮತ್ತು ಬಿಜಾಪುರದ ಅರಸರ ಮಾಂಡಲಿಕರಾಗಿ ಆಳುತ್ತಿದ್ದ ಒಂದು ರಾಜಮನೆತನವಾದ ಸೋಂದೆ ಅರಸರ ರಾಜಧಾನಿಯಾಗಿ ಪ್ರಖ್ಯಾತವಾಗಿದ್ದ ಈ ಗ್ರಾಮದಲ್ಲಿ ಯತಿವರೇಣ್ಯ, ಭಾಗವತ ಪ್ರಸಾರಕ, ಸಂಸ್ಕೃತ -- ಕನ್ನಡಗಳಲ್ಲಿ ವಿದ್ವಾಂಸರಾದ, ಹುಟ್ಟಿದ ಕೂಡಲೆ ಮಠವೊಂದಕ್ಕೆ ಅರ್ಪಿತರಾದ, ಸುಮಾರು ಒಂದು ನೂರು ಇಪ್ಪತ್ತು ವರ್ಷಗಳ ಪೂರ್ಣಾಯಸ್ಸನ್ನು ಪಡೆದು ಸುಮಾರು ೧೪೮೦ ರಿಂದ ೧೬೦೦ ರವರೆಗೆ ಜೀವಿಸಿದ್ದ ವಾದಿರಾಜರ ಬೃಂದಾವನವು ಪ್ರಸಿದ್ಧವಾಗಿದೆ.

ದ್ವೈತ ಪಂಥದ ಪ್ರವರ್ತಕರಾದವರು ಮಹಾನುಭಾವರಾದ ಶ್ರೀಮಧ್ವಾಚಾರ್ಯರು. ಇಂತಹ ಸುಪ್ರಸಿದ್ಧ ಪಂಥದ ಪಾವನ ಕ್ಷೇತ್ರವಾದ ಉಡುಪಿಗೆ ಸಮಿಾಪದಲ್ಲಿರುವ ಕುಂಭಾಸಿಯ ಹತ್ತಿರ ಹೂವಿನಕೆರೆ ಎಂಬುದೊಂದು ಗ್ರಾಮ. ಅಲ್ಲಿ ರಾಮಾಚಾರ್ಯ -- ಗೌರಮ್ಮ ಎಂಬ ದಂಪತಿಗಳಿದ್ದರು. ಅವರ ಮಗನಾಗಿ ಜನಿಸಿದವನೇ ಭೂವರಾಹ. ತಾಯಿ ಮಗುವಿಗೆ ಊರಿನ ಹೊರಗಡೆ ಮರವೊಂದರ ಆಸರೆಯಲ್ಲಿ ಜನ್ಮವಿತ್ತಳಾದ ಕಾರಣ, ಮೊದಲೇ ಗುರುಗಳೊಂದಿಗೆ ಮಾಡಿಕೊಂಡಿದ್ದ ಒಪ್ಪಂದದಂತೆ ಬಾಲ್ಯಸನ್ಯಾಸಕ್ಕೆ ಶರಣಾಗಬೇಕಾಯಿತು. ಗುರುಗಳು ಬಾಲಕನಿಗೆ ನೀಡಿದ ಸನ್ಯಾಸಾಶ್ರಮದ ಹೆಸರೇ ವಾದಿರಾಜತೀರ್ಥ.

ವಾದಿರಾಜರು ಮಾಧ್ವಯತಿಗಳಾದರು. ಮಧ್ವಾಚಾರ್ಯ ಪರಂಪರೆಯ ಅಷ್ಟಮಠಗಳಲ್ಲೊಂದಕ್ಕೆ ಪೀಠಾಧಿಪತಿಗಳಾದರು. ಅವರ ಜೀವನದ ಬಹುಭಾಗವೆಲ್ಲವೂ ಜಪ -- ತಪ -- ಅನುಷ್ಠಾನಗಳಂತಹ ಯತಿಜೀವನಕ್ಕೆ ಮಿಾಸಲಾಗಿದ್ದುದರಿಂದಲೂ, ವ್ಯಾಸರಾಯರಂತಹ ಪ್ರಖ್ಯಾತ ಗುರುಗಳ ಮಾರ್ಗದರ್ಶನದೊರೆತ ಕಾರಣದಿಂದಲೂ ತರ್ಕ -- ರಾಜನೀತಿ -- ಸಾಹಿತ್ಯಗಳಲ್ಲಿ ಸಾರ್ವಭೌಮತ್ವವನ್ನು ಹೊಂದಿದರು. ಯತಿವರೇಣ್ಯರು ಕರ್ನಾಟಕದ ಅನೇಕ ಭಾಗಗಳನ್ನು ಸಂಚರಿಸಿ ಭಾಗವತ ಧರ್ಮದ ಪ್ರಸಾರಕ್ಕೆ ವಿಶೇಷ ಚಾಲನೆ ನೀಡಿದರು.

ವಾದಿರಾಜರು ಅತೀಂದ್ರಿಯ ಸಂಪನ್ನರೂ ಆಗಿದ್ದರೆಂಬುದಕ್ಕೆ ಒಂದೆರಡು ಉದಾಹರಣೆಗಳಿವೆ. ಅವರು ಕೆಲವು ಪವಾಡದಂತಿದ ಘಟನೆಗಳನ್ನು ಮೆರೆದವರಾಗಿದ್ದಾರೆ. ನಾರಾಯಣಭೂತವೆಂಬ ಬ್ರಹ್ಮರಾಕ್ಷಸನನ್ನು ತಮ್ಮ ವಾದಪ್ರಾವೀಣ್ಯತೆಯಿಂದ ಸೋಲಿಸಿ ಅದರ ಮೂಲಕ ಅತಿಮಾನುಷ ಕೆಲಸಗಳನ್ನು ಮಾಡಿಸಿದರೆಂಬುದು ಅವುಗಳಲ್ಲೊಂದಾ

ಶ್ರೀಶ ನೀನಹುದೊ ಶೇಷಾಚಲವಾಸ ನೀನಹುದೊ --ಪ--

ಶೇಷಶಯನ ಸುರೇಶವಂದಿತಾಶೇಷ ಜನರನು ಪಾಲಿಸಿ ಬಡ್ಡಿ
ಕಾಸು ಸೇರಿಸಿ ಗಂಟುಕಟ್ಟುವ ಕ್ಯಾಸಕ್ಕಿ ತಿಮ್ಮಪ್ಪ ನೀನೆ --ಅ.ಪ--

ತಂದೆ ನೀನಹುದೊ ಕರುಣಾಸಿಂಧು ನೀನಹುದೊ
ಅಂದು ದ್ರುಪದನಂದನೆಯ ಎಳೆತಂದು ಘಾಸಿಯ ಮಾಡುತಿರಲು
ಮುಂದೆ ಬಂದು ಅಭಯವೆಂದು ಸಲಹಿದ ಮಂದಹಾಸ ಮುಕುಂದ ನೀನೆ --1--

ಧೀರ ನೀನಹುದೊ ಜಗದೋದ್ಧಾರ ನೀನಹುದೊ
ಬಾರಿ ಬಾರಿಗೆ ನಿನ್ನ ಪಾದಸುವಾರಿಜಂಗಳ ಸೇರಿದ ಭಕ್ತರ
ಘೋರ ದುರಿತವ ದೂರಗೈಸುವ ಮಾರಜನಕ ಅಪಾರ ಮಹಿಮನೆ --2--

ಧನ್ಯನೀನಹುದೊ ಸುರ--ಮುನಿ ಮಾನ್ಯ ನೀನಹುದೊ
ಪನ್ನಗಾರಿ ವಾಹನ ಧರೆಯೊಳು ಇನ್ನು ನಿನಗೆದುರಾರ ಕಾಣೆ ಪ್ರ
ಸನ್ನನಾಗೆಲೊ ಬಿನ್ನಹ ಕೇಳು ಪ್ರಸನ್ನವತ್ಸಲ ಶ್ರೀ ಹಯವದನ --3--

---ಶ್ರೀ ವಾದಿರಾಜರು.

ಗಿದೆ. ಈ ಬ್ರಹ್ಮರಾಕ್ಷಸನ ಮೂಲಕ ಹಿಮಾಲಯದ ಬದರಿಕಾಶ್ರಮದಿಂದ ತ್ರಿವಿಕ್ರಮದೇವರನ್ನು ಅಲ್ಲಿನ ರಥಸಮೇತ ತರಿಸಿ ಸೋಂದೆಯಲ್ಲಿ ಪ್ರತಿಷ್ಠಾಪಿಸಿದ ರೆಂದು ಜನಪ್ರತೀತಿಯಲ್ಲಿದೆ.

ವಾದಿರಾಜರ ಹೆಸರಿನಲ್ಲಿ ರಾಜನೆಂಬ ವಿಶೇಷ ಣವೂ ಉಂಟು. ಅವರ ರಾಜವೈಭವಕ್ಕೆ ಮೆರುಗು ನೀಡುವ ಘಟನೆಯೊಂದು ಅವರ ಸುದೀರ್ಘವಾದ ಜೀವನದ ಹಿನ್ನೆಲೆಯಲ್ಲಿ ಅಡಕವಾಗಿದೆ. ಇವರು ತಮ್ಮ ಪ್ರವಾಸ ಕಾಲದಲ್ಲಿ ಶಾಲ್ಮಲೀ ನದಿಯ ಪರಿ ಸರದ ಪ್ರಶಾಂತವಾದ ವಾತಾವರಣದಲ್ಲಿ ತಪಸ್ಸಿನಲ್ಲಿ ನಿರತರಾಗಿರುತ್ತಾರೆ. ಆ ಸಂದರ್ಭದಲ್ಲಿ ಸೋಂದೆಯ ಒಡೆಯ ಅರಸಪ್ಪ ನಾಯಕನು ವಿಪತ್ತಿನಲ್ಲಿ ಸಿಲುಕಿಕೊಂಡಿದ್ದ ಆತನನ್ನು ಇವರು ಪಾರು ಮಾಡಿದರು. ಅವನು ಇವರ ಶಿಷ್ಯರಾಗಿ ಯತಿವರೇಣ್ಯರಿಗೆ ಮುತ್ತಿನ ಸಿಂಹಾಸನ, ಛತ್ರ, ಚಾಮರ, ಸ್ವರ್ಣ ಪಾದುಕೆ, ಮುತ್ತಿನ ಕಿರೀಟ ಮೊದಲಾದ ರಾಜಮರ್ಯಾದೆಗಳನ್ನು ನೆರವೇರಿಸಿದನೆಂದು ತಿಳಿದು ಬರುತ್ತದೆ. ಈ ಸಂದರ್ಭದಲ್ಲಿ ಕಾಣಿಕೆಯಾಗಿ ನೀಡಲಾದ 'ಬಸವನ ಗಂಟೆ'ಯನ್ನು ಇಂದಿಗೂ ಸೋಂದೆಯ ಮಠದಲ್ಲಿ ಪೂಜೆಯ ಸಂದರ್ಭದಲ್ಲಿ ಉಪಯೋಗಿಸಲಾಗುತ್ತಿದೆ. ವಾದಿರಾಜರು ತಪಸ್ಸು ಮಾಡುತ್ತಿದ್ದ ಸ್ಥಳದಲ್ಲಿರುವ ಶಿಲೆಯ ಮೇಲೆ ವಾದಿರಾಜರ ಪಾದ ಚಿಹ್ನೆ ಮತ್ತು ಹಯಗ್ರೀವ ಮೂರ್ತಿಗಳನ್ನು ಮೂಡಿಸಲಾಗಿದೆಯೆಂದು ನಂಬಲಾಗಿದೆ.

ವಾದಿರಾಜರು ದೀನದಲಿತರ ಉದ್ಧಾರಕರೂ, ಪಂಡಿತ ಮಂಡಳಿಯ ಸಂರಕ್ಷಕರೂ, ಸಮಾಜ ಸುಧಾರಕರೂ ಆಗಿ ಬಾಳಿ ಬೆಳಗಿದವರು. ಇವರು ನೆರವೇರಿಸಿದ ಹಲವಾರು ಸಾಮಾಜಿಕ ಕಾರ್ಯಗಳೆಂದರೆ, ಉಡುಪಿಯಲ್ಲಿ ಎರಡು ವರ್ಷಕ್ಕೊಮ್ಮೆ 'ಪರ್ಯಾಯ' ವನ್ನೇರ್ಪಡಿಸಿದವರು ಅವರೇ. ಅಷ್ಟ ಮಠಗಳ ಯತಿಗಳಲ್ಲಿ ಕನ್ನಡ ಕೃತಿಗಳನ್ನು ರಚಿಸಿದವರಲ್ಲಿ ಇವರು ಮೊದಲಿಗರಾಗಿದ್ದಾರೆ. ಶ್ರೀಕೃಷ್ಣನ ಆರಾಧನಾ ಕ್ರಮದಲ್ಲಿ ಹಲವಾರು ಸುಧಾರಣೆಗಳನ್ನು ತಂದದ್ದಲ್ಲದೆ ಭಾಗವತ ಭಜನ ಪದ್ಧತಿಯನ್ನು ರಚಿಸಿದವರಾಗಿದ್ದಾರೆ. ಸ್ವರ್ಣಕಾರ, ಕೋಟೇಶ್ವರ ಮೊದಲಾದವರನ್ನು ಮಾತ್ರವಲ್ಲದೆ ಕೆಳ ಜಾತಿಯ ಹಲವರನ್ನು ತಮ್ಮ ಪಂಥಕ್ಕೆ ಸೇರಿಸಿಕೊಂಡ ಸಮಾಜ ಸುಧಾರಕರಾಗಿದ್ದಾರೆ.

'ಹಯವದನ' ಎಂಬುದು ವಾದಿರಾಜರ ಮುದ್ರಿಕೆಯಾಗಿದೆ. ಈ ಹೆಸರಿನಲ್ಲಿ ಅನೇಕ ಕೃತಿಗಳನ್ನು ರಚಿಸಿದ್ದಾರೆ. 'ಯುಕ್ತಿಮಲ್ಲಿಕಾ', 'ರುಕ್ಮಿಣೀಶ ವಿಜಯ', 'ತಾತ್ಪರ್ಯನಿರ್ಣಯ ಟೀಕೆ', 'ತೀರ್ಥಪ್ರಬಂಧ' ಮೊದಲಾದವು ಸಂಸ್ಕೃತ ರಚನೆಗಳಾಗಿವೆ. 'ವೈಕುಂಠ ವರ್ಣನೆ', 'ಲಕ್ಷ್ಮೀಶೋಬಾನೆ', 'ಸ್ವಪ್ನಗದ್ಯ', 'ತತ್ತ್ವಸುವಾಲಿ', 'ಭ್ರಮರಗೀತೆ', 'ಕೀಚಕವಧೆ' -- ಮೊದಲಾದವು ಇವರ ಕನ್ನಡ ಕೃತಿಗಳಾಗಿವೆ. ಮಧ್ವಮತದ ತತ್ತ್ವಪ್ರತಿಪಾದನೆಯನ್ನು ಕಾಣಬೇಕಾದವರು ಅವಶ್ಯವಾಗಿ ಇವರ ಕೃತಿಗಳನ್ನು ಅಧ್ಯಯನ ಮಾಡಲೇಬೇಕು. ವಾದಿರಾಜ ತೀರ್ಥರ ಸುಳಾದಿಗಳು, ಉಗಾಭೋಗಗಳು ಎಲ್ಲರಿಗೂ ಪ್ರಿಯವಾದದ್ದು. ಈ ದಾಸವರೇಣ್ಯರ ಬಗೆಗೆ, ಇವರ ಸ್ಮರಣಾರ್ಥವಾಗಿ ಜಗನ್ನಾಥದಾಸ ಮೊದಲಾದ ದಾಸಶ್ರೇಷ್ಠರು ಹಲವಾರು ಹಾಡುಗಳನ್ನು ರಚಿಸಿದ್ದಾರೆ.

ಸೋಂದೆಯು ಜೈನ, ಸ್ಮಾರ್ತ ಮತ್ತು ವೀರಶೈವ ಮಠಗಳಿಂದಲೂ ಪ್ರಸಿದ್ಧವಾಗಿದೆ. ಇಲ್ಲಿನ ದಟ್ಟವಾದ ಅರಣ್ಯದಲ್ಲಿ ಅಲ್ಲಲ್ಲಿ ಚೆದುರಿ ಬಿದ್ದಿರುವ ಅವಶೇಷಗಳು ಸೋದೆಯ ಗತವೈಭವವನ್ನುಶ್ರುತಪಡಿಸುತ್ತದೆ. ಹಿಂದಿನ ಹಿರಿಮೆಯ ಕುರುಹುಗಳಾಗಿ ಇಲ್ಲಿ ಹೆಬ್ಬಾಗಿಲಿನ ಬಹು ಎತ್ತರದ ಏಕವೃಕ್ಷಸ್ತಂಭಗಳಿವೆ. ಕಲಾಸಂಪತ್ತಿನಿಂದ ಕೂಡಿರುವ ಗಾರೆ ಸಾರಣೆಗಳ ಅವಶೇಷಗಳ ಕೊಳಗಳಿವೆ. ನುಣುಪಾಗಿರುವ ಶಿಲಾಫಲಕವೊಂದು ಕೆತ್ತನೆಯುಳ್ಳ ಚೆಲುವಾದ ಕಂಬಗಳ ಮೇಲೆ ಐದು ಅಡಿ ಎತ್ತರದಲ್ಲಿದ್ದು ಇದನ್ನು ಅರಸರ ಸಿಂಹಾಸನವೆಂದು ಹೇಳುತ್ತಾರೆ.

ಯತಿಸಾರ್ವಭೌಮರೊಬ್ಬರ ಸರ್ವಸಂಪನ್ನತೆಗೆ ನಿದರ್ಶನವಾಗಿರುವ ಸೋಂದೆಯನ್ನು 'ಸುಧಾಪುರ' ಎಂದು ಕರೆದಿರುವುದರಲ್ಲಿ ಅತಿಶಯವೇನಿಲ್ಲ. ವಾದಿರಾಜ ಸ್ವಾಮಿಗಳ 'ಬೃಂದಾವನ'ವನ್ನು ಹೊಂದಿ, ತತ್ತ್ವಸುಧೆಯನ್ನು ನಾಡಿನ ಎಲ್ಲ ದಿಕ್ಕುಗಳಿಗೆ ಪ್ರಸರಿಸಿರುವ ಈ ಗ್ರಾಮದ ಹಿರಿಮೆ ಘನವಾದದ್ದಷ್ಟೇ ಅಲ್ಲ, ಪವಿತ್ರವೂ ಆದದ್ದು. ಸೋದೆಯ ನವ ಇತಿಹಾಸ ನಿರ್ಮಾಪಕರೂ ಆದ ವಾದಿರಾಜ ಸ್ವಾಮಿಗಳ ಆರಾಧನೆಯನ್ನು ಇಲ್ಲಿ ಪ್ರತಿವರ್ಷ ಫಾಲ್ಗುಣ ಬಹುಳ ತೃತೀಯಯಂದು ಆಚರಿಸಲಾಗುತ್ತಿದೆ. ದ್ವೈತ ಸಿದ್ಧಾಂತದ ಕಿರಣಗಳು ಬೆಳಗಿ, ವೈದಿಕ ಸಂಸ್ಕೃತಿಯ ಪರಿಪಾಲಕರಲ್ಲಿ ನವಚೈತನ್ಯವುಂಟಾಗುತ್ತದೆ.



# ಶಿಲಾವಿಗ್ರಹ ನೀಡಿಕೆ ಯೋಜನೆಗಳು

ವಿವಿಧ ಹಿಂದೂ ದೇವಾಲಯಗಳಲ್ಲಿ ಪ್ರತಿಷ್ಠಾಪನೆಗಾಗಿ ತಿ. ತಿ. ದೇವಸ್ಥಾನಗಳು ಶಿಲಾವಿಗ್ರಹ ನೀಡುವಿಕೆಯ ಎರಡು ಯೋಜನೆಗಳನ್ನು ಅಂಗೀಕರಿಸಿವೆ.

ಶಿಲಾವಿಗ್ರಹ ದಾನ ಯೋಜನೆಯಲ್ಲಿ ವಿವಿಧ ದೇವಾಲಯಗಳಿಗೆ ಪ್ರತಿಷ್ಠಾಪನೆಗಾಗಿ ಶ್ರೀ ವೆಂಕಟೇಶ್ವರಸ್ವಾಮಿ ಹಾಗೂ ಶ್ರೀ ಪದ್ಮಾವತೀದೇವಿಯವರ ವಿಗ್ರಹಗಳನ್ನು ನೀಡಲಾಗುವುದು. ಇದಕ್ಕಾಗಿ ಅರ್ಜಿಗಳನ್ನು ತಿ. ತಿ. ದೇ. ಕಾರ್ಯನಿರ್ವಹಣಾಧಿಕಾರಿಗಳಿಗೆ ಕಳುಹಿಸಬೇಕು. ಜೊತೆಗೇ ದೇವಾಲಯದ ನಕ್ಷೆ, ಅಸಿಸ್ಟೆಂಟ್ ಕಮಿಷನರ್‌ಗಿಂತ ಕಡಮೆಯವರಲ್ಲದ ಸ್ಥಳೀಯ ದೇವಾದಾಯ ಇಲಾಖಾಧಿಕಾರಿಗಳಿಂದ ಪ್ರಮಾಣಪತ್ರವನ್ನು ಕಳುಹಿಸಬೇಕು.

ಹಿಂದೂ ದೇವಾಲಯಗಳಿಗಾಗಿ ಇತರ ಎಲ್ಲ ದೇವ ದೇವತೆಯರ ಶಿಲಾ, ಪಂಚಲೋಹ, ವಿಗ್ರಹಗಳನ್ನೂ 50 ಶತಾಂಶ ರಿಯಾಯಿತಿ ದರಗಳಲ್ಲಿ ಒದಗಿಸಲಾಗುವುದು. ಇವಕ್ಕಾಗಿಯೂ ಅರ್ಜಿಗಳನ್ನು ತಿ. ತಿ. ದೇ. ಕಾರ್ಯನಿರ್ವಹಣಾಧಿಕಾರಿಯವರಿಗೆ ಕಳುಹಿಸಬೇಕು. ಜೊತೆಗೇ ದೇವಾಲಯದ ನಕ್ಷೆ, ಅಸಿಸ್ಟೆಂಟ್ ಕಮಿಷನರ್ ಅವರ ಸ್ಥಾಯಿಯ ಸ್ಥಳೀಯ ಮುಜರಾಯಿ ಅಧಿಕಾರಿಯ ಪ್ರಮಾಣಪತ್ರವನ್ನು ಕಳುಹಿಸಬೇಕು. ಹಣದ ಸಂದಾಯವಾದ ನಂತರವೇ ವಿಗ್ರಹಗಳ ತಯಾರಿಕೆಯ ಕೆಲಸವನ್ನು ಕೈಗೆತ್ತಿಕೊಳ್ಳಲಾಗುವುದು.

ತಿರುಪತಿಯಿಂದ ವಿಗ್ರಹಗಳನ್ನು ಪಡೆದು ತಮ್ಮ ಸ್ಥಳಗಳಿಗೆ ಸಾಗಿಸುವ ಹೊಣೆ ಆಯಾ ಅಭ್ಯರ್ಥಿಗಳಿಗೇ ಸೇರಿದ್ದು.

ಕಾಲದಿಂದ ಕಾಲಕ್ಕೆ ತಿ. ತಿ. ದೇ. ಆಡಳಿತ ನಿರ್ವಾಹಕಮಂಡಳಿಯು ವಿಧಿಸುವ ಶರತ್ತುಗಳಿಗೆ ಅನುಗುಣವಾಗಿ ವಿಗ್ರಹಗಳನ್ನು ಸರಬರಾಜು ಮಾಡಲಾಗುವುದು.

*ಈ ವಿಷಯದಲ್ಲಿನ ಎಲ್ಲ ವ್ಯವಹಾರಗಳಿಗೂ ಬರೆಯಬೇಕಾದ ವಿಳಾಸ--*

*ಕಾರ್ಯನಿರ್ವಹಣಾಧಿಕಾರಿ, ತಿ. ತಿ. ದೇ., ತಿರುಪತಿ--517 501.*

# ಬ್ರಹ್ಮಾನುಭವ

---ಪಾರ್ವತಿ ಕೃ. ನ. ಮೂರ್ತಿ.

ಪ್ರತಿಯೊಬ್ಬ ಮನುಷ್ಯನಿಗೂ ತಾನು ಇರುವ ಸ್ಥಿತಿಗಿಂತ ಇನ್ನೂ ಉತ್ತಮವಾದ ಸ್ಥಿತಿಗೆ ಏರಬೇಕು ಎನ್ನುವ ಆಸೆ ಇರುತ್ತದೆ. ಇದು ಎಲ್ಲ ಮನುಷ್ಯರಲ್ಲೂ ಇರುವ ಸಹಜ ಸ್ವಭಾವ. ಈ ಸ್ವಭಾವದಿಂದಾಗಿಯೇ ಮನುಷ್ಯ ಹೆಜ್ಜೆ ಹೆಜ್ಜೆಯಾಗಿ ಮೇಲು ಮೇಲಕ್ಕೆ ಹತ್ತಿ, ಒಂದಲ್ಲ ಒಂದು ದಿನ ತನ್ನ ಗುರಿ ಮುಟ್ಟುವುದಕ್ಕೆ ಸಾಧ್ಯವಾಗುತ್ತದೆ.

ಮನುಷ್ಯನ ಈ ಸ್ವಭಾವದ ಹಿಂದೆ ಇನ್ನೂ ಒಂದು ಭಾವನೆ ಇರುತ್ತದೆ. ಅದನ್ನು ಅವನು ಬಾಯಿಬಿಟ್ಟು ಹೇಳಲಾರ. ಆದರೆ, ಅವನು ಮಾಡುವ ಕೆಲಸಗಳಿಂದ ಅದು ತಿಳಿದುಬರುತ್ತದೆ. ಅದೇ ಅವನ ಮನಸ್ಸಿನಲ್ಲಿ ಅಡಗಿ ಕುಳಿತಿರುವ ಭಯ.

ಈಗ ನೋಡಿ, ಜನ ದೇವಾಲಯಕ್ಕೆ ಹೋಗುತ್ತಾರೆ. ಹರಿಕಥೆ ಕೇಳುತ್ತಾರೆ. ಪುರಾಣ -- ಪುಣ್ಯಕಥೆ ಓದುತ್ತಾರೆ, ತೀರ್ಥಯಾತ್ರೆ ಮಾಡುತ್ತಾರೆ. ಪುಣ್ಯಕ್ಷೇತ್ರಗಳನ್ನು ನೋಡುತ್ತಾರೆ. ಉಪನ್ಯಾಸ -- ಪ್ರವಚನ ನಡೆಯುವಲ್ಲಿಗೆ ಹೋಗುತ್ತಾರೆ. ಇದನ್ನೆಲ್ಲಾ ಮಾಡುವಾಗ, ನಾವು ನಮಗೆ ತಿಳಿಯದ ಏನನ್ನೋ ಹೆಚ್ಚು ಹೆಚ್ಚಾಗಿ ತಿಳಿದುಕೊಳ್ಳಬೇಕು, ಕೇಳಬೇಕು, ಮಾಡಬೇಕು, ಎನ್ನುವುದು ಅವರ ಆಸೆ ಎನ್ನುವುದು ಅರ್ಥವಾಗುತ್ತದೆ. ಅದರ ಜೊತೆಯಲ್ಲಿಯೇ, ಈ ಆಸೆಯ ಹಿಂದೆಯೇ ನಾನು ತಿಳಿದಿರುವುದು ಸಾಲದು ಎನ್ನುವ ಕೊರತೆ ಅವರ ಮನಸ್ಸಿನಲ್ಲಿರುವುದೂ ತಿಳಿಯಬರುತ್ತದೆ. "ನಾನು ಪಾಪಿ! ಮಾಡಿರುವ ಪಾಪಗಳನ್ನು ಕಳೆದುಕೊಳ್ಳಬೇಕು. ಇನ್ನೂ ಹೆಚ್ಚಿನ ಪುಣ್ಯವನ್ನು ಸಂಪಾದಿಸಬೇಕು." ಎಂಬ ಭಾವನೆ ಕಂಡು ಬರುತ್ತದೆ. ಇದೇ, ಮನುಷ್ಯರ ಆಳ ಮನಸ್ಸಿನಲ್ಲಿ ಅಡಗಿರುವ ಭೀತಿ. ಬೇರೆಯವರಿಗೆ ತನ್ನನ್ನು ಹೋಲಿಸಿಕೊಂಡು "ನಾನು ಕೆಳಮಟ್ಟದಲ್ಲಿರುವವನು", "ನನ್ನಲ್ಲಿರುವುದು ಕಡಿಮೆ", "ನಾನು ಕೀಳು", "ನಾನು ಪಾಪಿ!" ಎನ್ನುವ ಈ ಭಾವನೆಯನ್ನು ಕೀಳರಿಮೆ ಎನ್ನುತ್ತಾರೆ. ಆಧ್ಯಾತ್ಮದಲ್ಲಿ ಇದನ್ನು 'ಜೀವಭಾವ' ಎಂದು ಕರೆಯುತ್ತಾರೆ.

ಅಂದರೆ, ಮನುಷ್ಯ ತನ್ನನ್ನು 'ಜೀವ' ಎಂದು ತಿಳಿದಿರುತ್ತಾನೆ. ಹೀಗೆ, ತಿಳಿದಿರುವುದಕ್ಕೆ ಕಾರಣವನ್ನು ಹುಡುಕೋಣ--

ಹುಟ್ಟಿದ ಮಗು ಕೆಲ ದಿನಗಳ ನಂತರ, ಬೇರೆಯವರನ್ನು ಗುರುತಿಸಲು ಆರಂಭಿಸುತ್ತದೆ. ತನ್ನನ್ನು ನೋಡುವವರನ್ನು ದೃಷ್ಟಿಸಿ ನೋಡುವುದು, ತುಟಿ ಅರಳಿಸಿ, ನಗುಮುಖ ಮಾಡುವುದು -ಇವುಗಳಿಂದ ನಾವು ಹೀಗೆ ತಿಳಿದುಕೊಳ್ಳುತ್ತೇವೆ. ನಂತರ, ಮಗು ಚಿಕೊಳ್ಳುತ್ತದೆ, ಮುಂದೆ ಹೋಗುತ್ತದೆ, ಅಂಬೆಗಾಲಿಡುತ್ತದೆ, ಕುಳಿತುಕೊಳ್ಳುತ್ತದೆ, ನಿಲ್ಲುತ್ತದೆ, ನಡೆಯುತ್ತದೆ, ಮಾತನಾಡಲು ಕಲಿಯುತ್ತದೆ. ಈ ಎಲ್ಲದರಲ್ಲೂ, ತನ್ನ ಪ್ರತಿಯೊಂದು ಕೆಲಸವನ್ನೂ, ಕಣ್ಣಲ್ಲಿ ಕಣ್ಣಿಟ್ಟು ನೋಡುತ್ತಾ ಸಂತೋಷಪಡುವ ತಾಯಿಯ ಮೆಚ್ಚುಗೆ ಮಗುವನ್ನು ಮುಂದುವರೆಯಲು ಪ್ರೋತ್ಸಾಹಿಸುತ್ತದೆ. ನಾಲ್ಕು ವರ್ಷದ ವೇಳೆಗೆ ಗೆಳೆಯರ ಜೊತೆ ಗೋಲಿ, ನಂತರದ ದಿನಗಳಲ್ಲಿ ಬುಗುರಿ, ಚಿನ್ನಿದಾಂಡು ಆಡುತ್ತದೆ. ಗಾಳಿಪಟ ಹಾರಿಸಿ ಸಂತೋಷಪಡುತ್ತದೆ. ಇನ್ನೂ ಕೆಲ ದಿನ ಕಳೆದರೆ, ಈಗ ದೊಡ್ಡವನಾಗಿರುವುದರಿಂದ, ಸೈಕಲ್ ಸವಾರಿ ಮಾಡುತ್ತಾನೆ. ಹೆಚ್ಚಿನ ಅನುಕೂಲದೊರೆತರೆ, ಲೂನಸವಾರಿ ಮಾಡುತ್ತಾನೆ. ಅಂದರೆ, ಮಗುವಾಗಿದ್ದವನು ಬೆಳೆಯುತ್ತಾ ದೊಡ್ಡವನಾಗುತ್ತಾ ಹೋದ ಹಾಗೆಲ್ಲಾ, ತಾನು ಚಿಕ್ಕವನಾಗಿದ್ದಾಗ ಉಪಯೋಗಿಸುತ್ತಿದ್ದ ವಸ್ತುಗಳನ್ನು ಬಿಟ್ಟು, ಅದಕ್ಕಿಂತ ಹೆಚ್ಚು ಸಂತೋಷ ಸಿಕ್ಕುವುದೆಂದು ತೋರಿದಾಗ, ಹಳೆಯದನ್ನು ಬಿಟ್ಟು ಹೊಸದನ್ನು ಪಡೆಯುವುದನ್ನು ಕಾಣುತ್ತೇವೆ.

ಅಂದರೆ, ಮನುಷ್ಯ ಹುಟ್ಟಿದಾಗಿನಿಂದಲೂ ಅವಲಂಬನೆಯಿಂದಲೇ ಬದುಕುತ್ತಿರುತ್ತಾನೆ. ಒಂದು ಶ್ರೇಷ್ಠವಾದ ಅವಲಂಬನೆ ಸಿಕ್ಕರೆ, ಅವನ ದೃಷ್ಟಿಯಲ್ಲಿ ಕನಿಷ್ಠವಾದುದನ್ನು ಬಿಡುತ್ತಾನೆ ಎಂದಾಯಿತು.

ಒಂದು ಉದಾಹರಣೆಯನ್ನು ನೋಡೋಣ. ಸಂಕ್ರಾಂತಿಯ ಹಬ್ಬದಲ್ಲಿ ಎಳ್ಳಿನ ಜೊತೆಯಲ್ಲಿ ಸಕ್ಕರೆಯ ಕಾಳನ್ನೂ ಬೀರುತ್ತಾರೆ. ಅದನ್ನು ಕುಸುರಿಕಾಳು ಎಂದೂ ಕರೆಯುತ್ತಾರೆ. ಅದನ್ನು ಮಾಡುವ ವಿಧಾನ ನೋಡಿ --ಮೊದಲನೆಯದಾಗಿ, ಮಂದವಾದ ಸಣ್ಣ ಉರಿಯನ್ನು ಒಂದೇ ಸಮನಾಗಿ ಉರಿಯುವಂತೆ ಎಚ್ಚರಿಕೆ ವಹಿಸಬೇಕು. ಸಕ್ಕರೆಯ ಎಳೆಯ ಪಾಕವನ್ನು ಶುದ್ಧವಾಗಲು ಎರಡು ಮೂರು ಬಾರಿ, ಸ್ವಲ್ಪವೂ, ಕೊಳೆ ಇಲ್ಲದ ಬಿಳಿಯ ಬಟ್ಟೆಯಲ್ಲಿ, ಶೋಧಿಸುತ್ತಾ, ಶೋಧಿಸುತ್ತಾ, ಹದವಾಗಿ ಶುದ್ಧಪಡಿಸಬೇಕು. ನಂತರ, ಕಲ್ಲು ಮಣ್ಣಿಲ್ಲದ, ಆರಿಸಿ ಶುದ್ಧಪಡಿಸಿದ ಕೆಲವೇ ಎಳ್ಳುಕಾಳುಗಳನ್ನು ಮೊದಲು ತಿಳಿಸಿದ ಸಣ್ಣ ಉರಿಯಲ್ಲಿ, ತೊಟ್ಟು ತೊಟ್ಟೇ ಪಾಕ ಹಾಕಿ, ಸ್ವಲ್ಪವೇ ಹೊತ್ತು ಹುರಿದು ತೆಗೆದಿಡಬೇಕು. ಹೀಗೆ, ಎಂಟು ಹತ್ತು ದಿನಗಳು ತೊಟ್ಟು ತೊಟ್ಟು ಪಾಕ ಹಾಕಿ ಹುರಿದು ತೆಗೆದಿರಿಸಿ, ಮತ್ತೆ ಮರುದಿನ ಹುರಿದು, ಹೀಗೆಯೇ ಮಾಡುತ್ತಾ ಮಾಡುತ್ತಾ, ಕಡೆಗೆ ಒಂದುದಿನ ಎಳ್ಳುಕಾಳು ಇಲ್ಲವಾಗಿ ಸಕ್ಕರೆಯ ಮುಳ್ಳು ಮುಳ್ಳು ಬಂದ ಕುಸುರಿಯ ಕಾಳು ಹೊಸದಾದ ರೂಪ ಪಡೆದು ಅಂದವಾದ ಶೋಭೆಯಿಂದ ಸಿದ್ಧವಾಗುತ್ತದೆ. ಈಗ ಅದಕ್ಕೆ ಸಕ್ಕರೆ ಪಾಕಹಾಕಿ ಹುರಿಯಬೇಕಾಗಿಲ್ಲ.

ಹೀಗೆಯೇ, ನಾನು ಪಾಪಿ! ನಾನು ಜೀವಿ! ಎಂದು ತಿಳಿದ ಮನುಷ್ಯ ತನ್ನ ಜೀವನದಲ್ಲಿ ದಿನ ನಿತ್ಯ ಉಂಟಾಗುವ ಸಂದೇಹಗಳನ್ನು, ಸಮಸ್ಯೆಗಳನ್ನು ನಿವಾರಿಸಿಕೊಳ್ಳಲು, ತಾನೇ ಮತ್ತೆ ಮತ್ತೆ ಪ್ರಯತ್ನಪಡಬೇಕು. ಹೀಗೆ ಮಾಡುವಾಗ, ಉತ್ತಮವಾದ ಹೊಸಯತ್ನ ಸಿಕ್ಕಿತು ಎನಿಸಿದರೆ, ಹಳೆಯ ಪ್ರಯತ್ನವನ್ನು ಬಿಟ್ಟು ಹೊಸದನ್ನು ಹಿಡಿದು ಮುಂದುವರೆಯಬೇಕಾಗುತ್ತದೆ. ಹುಟ್ಟಿದಾಗಿನಿಂದಲೂ ಅವಲಂಬನೆಯಿಂದಲೇ ಬೆಳೆದು ಬಂದ ದೇಹ ತಕ್ಷಣವೇ ಬ್ರಹ್ಮಭಾವವನ್ನು ಪಡೆಯುವುದು ಸಾಧ್ಯವಿಲ್ಲ. ಅವನು ತನ್ನ ಪ್ರಯತ್ನಗಳನ್ನು ಮುಂದುವರೆಸುತ್ತಾ ಹೋದಂತೆ, ಹಿಂದಿನ ಜನ್ಮದಲ್ಲಿ ಮಾಡಿದ ಒಳ್ಳೆಯ ಕೆಲಸಗಳ ಫಲವಾಗಿ, ಈಗ ಮಾಡುತ್ತಿರುವ ಪ್ರಯತ್ನಗಳು ದೈವದ ವಿಶೇಷವಾದ ಅನುಗ್ರಹದಿಂದಾಗಿ, ಒಂದು ದಿನ ಸಂಪೂರ್ಣವಾದ ಫಲವನ್ನು ಕೊಡುತ್ತವೆ. ಆಗ ಅವನ ಕಿವಿಗಳಲ್ಲಿ ನಗಾರಿಯ ದನಿ ಅಪ್ಪಳಿಸುವ ಹಾಗೆ 'ನೀನೇ ಬ್ರಹ್ಮ' 'ನೀನೇ ಬ್ರಹ್ಮ' ಎಂಬ ದನಿ ಮೊಳಗುತ್ತದೆ. ಆಗ ಅವನಿಗೆ ಎಲ್ಲ ಸಮಸ್ಯೆಗಳೂ ನಿವಾರಣೆಯಾಗಿ ಬಿಡುತ್ತವೆ. ಯಾವ ಸಂದೇಹವೂ ಉಳಿಯುವುದಿಲ್ಲ. 'ನಾನು ಜೀವನಲ್ಲ' 'ನಾನು ಬ್ರಹ್ಮನೇ' ಎಂಬ ನಿಶ್ಚಯವಾದ ತಿಳುವಳಿಕೆ ಉಂಟಾಗುತ್ತದೆ. ಆಗ, ಇಲ್ಲಿಯವರೆಗೆ ಬೇಕಾಗಿದ್ದ ಅವಲಂಬನೆಗಳೆಲ್ಲವೂ ತಾವಾಗಿಯೇ ಇಲ್ಲವಾಗಿ ಬಿಡುತ್ತವೆ. 'ನೀನು ದೇವ' 'ನಾನು ಜೀವ' ಎನ್ನುವ ಕೀಳರಿಮೆ ಅವನಿಗೆ ಇರುವುದಿಲ್ಲ. ನಾನು ಸದಾ ನಿನ್ನ ಆಶ್ರಯದಲ್ಲಿಯೇ ಇರುತ್ತೇನೆ ಎಂದುಕೊಂಡರೂ, ನಿನಗೂ ನನಗೂ ಯಾವ ಭೇದವೂ ಇಲ್ಲ ಎಂದು ಸ್ಪಷ್ಟವಾಗಿ ತಿಳಿದು 'ನಾನೇ ಬ್ರಹ್ಮ' ಎಂದು ಗುರುತಿಸುತ್ತಾನೆ. ಇದೇ "ಆತ್ಮಸಾಕ್ಷಾತ್ಕಾರ".

ಸಮುದ್ರವನ್ನು ನೋಡಿ. ಅಲೆಗಳು ಮೇಲೆ ಮೇಲೆ ಏಳುತ್ತವೆ. ಸ್ವಲ್ಪವೇ ಸಮಯದಲ್ಲಿ ದಡಕ್ಕೆ ಬಂದು ಇಲ್ಲವಾಗುತ್ತವೆ. ಈ ಅಲೆಗಳು ಮೇಲೆದ್ದರೂ, ಇಲ್ಲವಾದರೂ, ಶಾಂತವಾದರೂ ಸಮುದ್ರ ಸಮುದ್ರತಾನೇ!

ಇದೇ ರೀತಿಯಲ್ಲಿ, ಜೀವ -- ಬ್ರಹ್ಮ ಎಂದು ಬೇರೆ ಬೇರೆಯಾಗಿ ಕಂಡರೂ ಜೀವನೂ ಬ್ರಹ್ಮನೇ ಎನ್ನುವುದನ್ನು ಮನುಷ್ಯ ತನ್ನ ಪ್ರಯತ್ನಗಳಿಂದ, ಅನುಭವಗಳಿಂದ ತಿಳಿದುಕೊಳ್ಳುತ್ತಾನೆ. ಆಗಲೇ ಅವನಿಗೆ ಬ್ರಹ್ಮನ ಅನುಭವವಾಗುವುದು. "ಅದೇ ಬ್ರಹ್ಮಾನುಭವ"

(ಹುಬ್ಬಳ್ಳಿಯ ಆರ್ಷೇಯ ವಿದ್ಯಾಪೀಠದ ಸ್ವಾಮಿಜಿ ಶ್ರೀ ಚಿದ್ರೂಪಾನಂದಜೀಯವರ ಉಪನ್ಯಾಸದ ಆಧಾರ.)



ಸಂದರ್ಶಿಸಿ ಆನಂದಿಸಿ

# ಪ್ರಾಕ್ತನ ವಸ್ತು ಸಂಗ್ರಹಾಲಯ

ಸನಾತನ ಧರ್ಮದ ಮೌಲ್ಯ ಹಿರಿಮೆ, ಪರಂಪರೆ, ಸಂಸ್ಕೃತಿಗಳ ಪ್ರಸಾರದಲ್ಲಿ ತಿರುಮಲೆ ತಿರುಪತಿ ದೇವಸ್ಥಾನಗಳು ಹಲವು ರೀತಿಯಲ್ಲಿ ಕೆಲಸಮಾಡುತ್ತಿದ್ದು, ಈ ಉದ್ದೇಶ ಸಾಧನೆಗಾಗಿ ತಿರುಮಲೆ ಹಾಗೂ ತಿರುಪತಿಗಳಲ್ಲಿ ಪುರಾವಸ್ತು ಪ್ರದರ್ಶನಶಾಲೆಗಳನ್ನು ಏರ್ಪಡಿಸಲಾಗಿದೆ.

ತಿರುಮಲೆಯ ಸಾವಿರ ಕಂಬದ ಸಂಭಾಂಗಣದಲ್ಲಿ ತಿರುಪತಿ ತಿರುಮಲೆಗಳ ಪರಿಸರದಲ್ಲಿ ದೊರೆತ ಎಲ್ಲ ಪುರಾವಸ್ತುಗಳನ್ನು, ಮಾನವ ಶಾಸ್ತ್ರ, ಪ್ರಾಕ್ ವಸ್ತುಗಳನ್ನೂ ನೆಲ, ಸಸ್ಯಗಳ ಬಗೆಗಳನ್ನೂ, ವಾಸ್ತು ವಿಗ್ರಹ ಶಿಲ್ಪಗಳನ್ನೂ ದೇವಾಲಯಗಳ ಆಚಾರ ವಿಚಾರಗಳನ್ನೂ ಸಂಗ್ರಹಿಸಲಾಗಿದೆ. ಇಲ್ಲಿ ಅಪರೂಪದ ಮರದ ಕೆತ್ತನೆಗಳೂ, ಶಿಲ್ಪಗಳೂ, ಲೋಹ ವಿಗ್ರಹಗಳೂ, ಸಂಗೀತದ ವಿವಿಧ ಪ್ರಾಚೀನ ವಾದ್ಯ ವಿಶೇಷಗಳೂ, ತಿ.ತಿ.ದೇ. ಮತ್ತಿತರ ಕಡೆಗಳಲ್ಲಿ ದೊರೆತ ಆಯುಧಗಳೂ ಪ್ರದರ್ಶಿತವಾಗಿವೆ. ಬೇರೆ ಬೇರೆ ಜಮೀಂದಾರರಿಂದ ದಿವಂಗತ ವೇಟೂರಿ ಪ್ರಭಾಕರಶಾಸ್ತ್ರಿಯವರು ಸಂಗ್ರಹಿಸಿದ ವಸ್ತುಗಳೂ ಇಲ್ಲಿವೆ. ೧೯೮೦ ಡಿಸೆಂಬರ್ ೨೭ ರಂದು ಅಂದಿನ ರಾಷ್ಟ್ರಾಧ್ಯಕ್ಷರಾಗಿದ್ದ ಶ್ರೀ ಎನ್. ಸಂಜೀವರೆಡ್ಡಿಯವರು ಈ ವಸ್ತು ಪ್ರದರ್ಶನ ಶಾಲೆಯನ್ನು ಉದ್ಘಾಟಿಸಿದರು.

ತಿರುಪತಿಯ ಶ್ರೀ ಗೋವಿಂದರಾಜಸ್ವಾಮಿ ದೇವಾಲಯದ ಬಳಿಯ ಕಚೇರಿನಮ್ಮಾಳ್ವಾರ್ ದೇವಾಲಯದ ಪೆರಿಯಾಳ್ವಾರ್ ಮಂಟಪದಲ್ಲಿ, ವೈಷ್ಣವ ದೇವಾಲಯ ಕಲೆಗೆಂದು ಮೀಸಲಾದ ಶ್ರೀ ವೆಂಕಟೇಶ್ವರ ವಾಸ್ತುಕಲಾವಸ್ತು ಸಂಗ್ರಹಾಲಯವನ್ನು ಏರ್ಪಡಿಸಲಾಗಿದೆ. ಈ ಸಂಗ್ರಹಾಲಯದಲ್ಲಿ ವೈಷ್ಣವತೆಯ ವೈಶಿಷ್ಟ್ಯವನ್ನು ವಿವರಿಸಲು ಪ್ರಯತ್ನಿಸಲಾಗಿದೆ. ಇದರ ಹಲವು ವಿಭಾಗಗಳೆಂದರೆ---

ವಾಸ್ತುಶಾಸ್ತ್ರ: ಈ ವಿಭಾಗದಲ್ಲಿ ದೇವಾಲಯ ನಿರ್ಮಾಣದಲ್ಲಿನ ಯೋಜನಾವಿವರಗಳನ್ನು ನೀಡಲಾಗಿದೆ. ಆಗಮ ಹಾಗೂ ಶಿಲ್ಪಶಾಸ್ತ್ರಗಳು ದೇವಾಲಯದ ನಿರ್ಮಾಣದ ಸ್ಥಳ ನಿರ್ಧಾರ, ಭೂಶುದ್ಧಿ, ವಿಗ್ರಹಗಳ ದಿಕ್ಕು ಹಾಗೂ ಭೂಮಿಯ ನಿರ್ದೇಶನಗಳನ್ನು ನೀಡಿದ್ದು, ಸೂಕ್ತ ವಿವರ ಪಟ್ಟಿಗಳು ಹಾಗೂ ಮಾದರಿಗಳಿಂದ-ಈ ವಿವರಗಳನ್ನು ಸ್ಪಷ್ಟಪಡಿಸಲಾಗಿದೆ.

ಶಿಲ್ಪಶಾಸ್ತ್ರ : ಈ ವಿಭಾಗದಲ್ಲಿ ವಿಗ್ರಹಗಳ ಉದ್ದಳತೆಗಳು ಸಾಪೇಕ್ಷವಾದುದೆಂಬುದನ್ನು ವಿವರಿಸಿ ಅವು ಸ್ಥಳೀಯ ಹಾಗೂ ಯಾಜಮಾನ್ಯವನ್ನು ಅನುಸರಿಸುವುದೆಂದು ವಿವರಿಸಲಾಗಿದೆ.

ವಿಗ್ರಹಗಳು : ವಿಷ್ಣುವಿನ ಹಲವಾರು ರೂಪಗಳ, ಭಂಗಿಗಳೂ, ಆಭರಣಗಳೂ ವ್ಯಾವೃತವಾಗಿವೆ.

ಆಳ್ವಾರ್‌ಗಳು : ವಿಶಿಷ್ಟಾದ್ವೈತ ತತ್ತ್ವದ ಪ್ರಪತ್ತಿ ಮಾರ್ಗಕ್ಕೆ ಆಳ್ವರರ ಸಂದೇಶಗಳೇ ಆಧಾರ. ಶ್ರೀ ರಾಮಾನುಜಾಚಾರ್ಯರು ಆಳ್ವಾರರನ್ನು ಆರಾಧಿಸುತ್ತಿದ್ದರು.

ಸಮಯಾಚಾರಗಳು : ಸನಾತನದ ಧರ್ಮದಲ್ಲಿ ಹುಟ್ಟಿನಿಂದ ಸಾವಿನವರೆಗೆ ಹದಿನಾರು ಸಂಸ್ಕಾರಗಳಿಗೆ ಪ್ರಾಮುಖ್ಯವಿದೆ. ವಿಷ್ಣುದೇವಾಲಯದಲ್ಲಿ ಬಳಸಲಾಗುವ ಎಲ್ಲ ಪರಿಕರಗಳ ವಿವರಗಳೂ, ಹೋಮ ಕುಂಡ ಹಾಗೂ ವಾಹನಗಳ ಮಾದರಿಗಳೂ ಇವೆ. ೧೦೮ ದಿವ್ಯಕ್ಷೇತ್ರಗಳೂ ೧೦೮ ತಿರುಪತಿಗಳೆಂದೇ ಪ್ರಸಿದ್ಧವಾಗಿರುವ ವೈಷ್ಣವ ಕ್ಷೇತ್ರಗಳ ಚಿತ್ರಗಳ ಮೂಲಕ ಈ ದೇವಾಲಯಗಳ ವಾಸ್ತುಶಿಲ್ಪದ ಪರಿಚಯವನ್ನು ನೀಡಲಾಗಿದೆ.

ಕಲೆ : ಹರಿದಾಸರ ಹಿರಿಮೆಯನ್ನೂ ಭರತನಾಟ್ಯಾದಿ ಕಲೆಗಳನ್ನೂ ವಿವರಿಸಲಾಗಿದೆ. ವಿಷ್ಣು, ಶಕ್ತಿ, ಷಣ್ಮುಖ, ಮೊದಲಾದ ಅನೇ ಶತಕದ ವಿಗ್ರಹಗಳಿಂದ ಆರಂಭವಾದ ಸಂಗ್ರಹ ಆಕರ್ಷಕವಾಗಿದೆ. ಇನೇ ರಾಜರಾಜನ ಕುಂತ್ರಪಾಕಂ ದೇವಾಲಯದಿಂದ ಸಂಗ್ರಹಿತವಾದ ಚಾರಿತ್ರಿಕ ವಿವರಗಳಿವೆ.

ಪರಂಪರೆಯ ಪರಿಚಯ ಹೊಂದಿರಿ --- ಒಮ್ಮೆ ಭೇಟಿ ನೀಡಿರಿ.

---

**ಕಾಲ : ಬೆಳಗ್ಗೆ ೮ ರಿಂದ**
**ರಾತ್ರಿ ೮ ರ ವರೆಗೆ**

**ಟಿಕೆಟ್ ರೂ. ೧--೦೦ (ಹಿರಿಯರಿಗೆ)**
**,, ,, ೦--೫೦ (ಕಿರಿಯರಿಗೆ)**

# ✲ ವಸುಧೈವ ಕುಟುಂಬಕಂ ✲

---ವಿಶ್ವೇಶ್ವರ ವಿ. ಕೆ.

ಅಯಂ ನಿಜಃ ಪರೋವೇತಿ
ಗಣನಾ ಲಘು ಚೇತಸಾಂ
ಉದಾರ ಚರಿತಾನಾಂ ತು
ವಸುಧೈವ ಕುಟುಂಬಕಂ

ಸಂಸ್ಕೃತ ಭಾಷೆಯಲ್ಲಿ ಲಭ್ಯವಾಗುವ ಅಸಂಖ್ಯ ಸುಭಾಷಿತಗಳಲ್ಲಿ ಇದೂ ಒಂದು. ಸುಭಾಷಿತದ ಲಕ್ಷಣವೇ ಅದು! ಲೋಕದ ಒಳಿತು--ಕೆಡುಕನ್ನೂ, ನೀತಿ -- ನಿಯಮಗಳನ್ನೂ, ಸುಂದರ -- ಸಾರ್ಥಕ ಬಾಳುವೆಯ ಸೂತ್ರಗಳನ್ನೂ ತಿಳಿಸಿ ಹೇಳುವ ಸುಭಾಷಿತಗಳು ನಮ್ಮ ಸಂಸ್ಕೃತಿಯ ಅವಿಭಾಜ್ಯ ಅಂಗಗಳಾಗಿವೆ. ಸಂಸ್ಕೃತಿಯ ಗುಣ -- ಗುರುತುಗಳನ್ನೂ ಹಿರಿಮೆ--ಗರಿಮೆಗಳನ್ನೂ ಇವು ಎತ್ತಿಹಿಡಿಯುತ್ತವೆ.

ಬುದ್ಧಿಹೀನರು ಮತ್ತು ಸಾಮಾನ್ಯ ಬುದ್ಧಿಮತ್ತೆಯುಳ್ಳವರು 'ಇದು' ನನ್ನದು', 'ಅದು ಅವನದು' ಎಂದು ಸ್ವಾರ್ಥಪರವಾದ ಗಣನೆಗಳಲ್ಲೇ ಕಾಲ ಕಳೆಯುತ್ತಾರೆ. ಆದರೆ ವಿಶಾಲ ಹೃದಯದ ಔದಾರ್ಯವಂತರು ಇಡೀ ಭೂಮಿಯನ್ನೇ ಒಂದು ಕುಟುಂಬವಾಗಿ ಪರಿಗಣಿಸುತ್ತಾರೆ. ಎಂದು ಮೇಲಿನ ಸುಭಾಷಿತ ಸ್ಪಷ್ಟಪಡಿಸುತ್ತದೆ. ವಿಶ್ವದ ಸಕಲ ಜೀವಿಗಳನ್ನೂ ನಮ್ಮವರೆಂದೇ ತಿಳಿಯುವ ಶ್ರೇಷ್ಠತೆ ನಮ್ಮ ಸಂಸ್ಕೃತಿಯದು.

ಯಾಕೆಂದರೆ, ಮನುಷ್ಯನ ಜೀವನ ಮತ್ತು ಪ್ರಪಂಚದ ಆಗುಹೋಗುಗಳು -- ಇವೆರಡೂ ಪರಸ್ಪರ ಅವಿನಾಭಾವಿಯಾದ ಸಂಬಂಧವನ್ನು ಹೊಂದಿರುವವುಗಳಲ್ಲವೇ? ಮನುಷ್ಯನಿಲ್ಲದೆ ಸಮಾಜವಿಲ್ಲ; ಸಮಾಜವಿಲ್ಲದೆ ಮನುಷ್ಯನಿಲ್ಲ. ಒಂದರ ಆಧಾರದ ಮೇಲೆಯೇ ಇನ್ನೊಂದು ನಿಂತಿರುವುದು. ಖಗ -- ಮೃಗ, ಕ್ರಿಮಿ -- ಕೀಟ, ಗಿಡ -- ಮರಗಳಿಂದೊಡಗೂಡಿದ ಇಂಥ ಹಲವು ಸಮಾಜಗಳು ಕೂಡಿಯೇ ಅಲ್ಲವೆ ಈ ವಸುಧೆ ಜೀವಂತವಾಗಿರುವುದು? ಆದ್ದರಿಂದ ಜಗವನ್ನು ತನ್ನ ಬಂಧುಗಳ ಕೂಟವಾಗಿ ಕಾಣಬೇಕಾದ ಅಗತ್ಯವಿದೆ.

ವಸುಧೆಯೊಳಗಿರುವವರೆಲ್ಲ ಅಣ್ಣ -- ತಮ್ಮಂದಿರು, ಅಕ್ಕ -- ತಂಗಿಯರು, ಯಾಕೆಂದರೆ ಇವರೆಲ್ಲರೂ ಸರ್ವಶಕ್ತನಾದ ಭಗವಂತನ ಮಕ್ಕಳೇ! ಶ್ರೀಕೃಷ್ಣನು ಗೀತೆಯಲ್ಲಿ ಹೇಳುತ್ತಾನೆ:

ಸರ್ವಭೂತಸ್ಥಮಾತ್ಮಾನಂ
ಸರ್ವ ಭೂತಾನಿ ಚಾಽತ್ಮನಿ
ಈಕ್ಷತೇ ಯೋಗಯುಕ್ತಾತ್ಮಾ
ಸರ್ವತ್ರಸ್ಸಮದರ್ಶನಃ

ಯೋಗದಿಂದ ಮಾಗಿದ ಮನಸ್ಸುಳ್ಳವನು ಎಲ್ಲ ವಿಷಯಗಳನ್ನೂ ಸಮಾನವಾಗಿ ಕಾಣುತ್ತಾನೆ. ಭಗವಂತನು ಎಲ್ಲ ಜೀವಿಗಳಲ್ಲಿ ಇರುವಂತೆಯೂ ಎಲ್ಲ ಜೀವಿಗಳು ಭಗವಂತನಲ್ಲಿ ಇರುವಂತೆಯೂ ಕಾಣುತ್ತಾನೆ.

ವಿಶ್ವದ ರಹಸ್ಯ ಅಡಗಿರುವುದು ಇಲ್ಲೇ. ದೇವನ ಅಂಶ ಪ್ರತಿಯೊಂದು ಜೀವಿಯಲ್ಲಿಯೂ ಸುಪ್ತವಾಗಿದೆಯೆಂಬುದನ್ನು ಅರಿತುಕೊಂಡರೆ, ಪ್ರತಿಯೊಬ್ಬರನ್ನೂ "ಇವನೂ ನನ್ನಂಥವನೇ, ನನ್ನವನೇ" ಎಂಬುದಾಗಿ ಪರಿಗಣಿಸುವ ದೃಷ್ಟಿ ಮೂಡಿಬರುತ್ತದೆ.

ಆತ್ಮೌಪಮ್ಯೇನ ಸರ್ವತ್ರ
ಸಮಂ ಪಶ್ಯತಿ ಯೋಽರ್ಜುನ
ಸುಖಂ ನಾ ಯದಿ ವಾ ದುಃಖಂ
ಸ ಯೋಗೀ ಪರಮೋ ಮತಃ

'ಯಾವನು ಎಲ್ಲ ಪ್ರಾಣಿಗಳನ್ನೂ, ಸುಖವಾಗಲೀ -- ದುಃಖವಾಗಲೀ, ತನ್ನಂತೆಯೇ ಎಂದು ತಿಳಿದುಕೊಳ್ಳುತ್ತಾನೋ ಆ ಜ್ಞಾನಿಯು ಎಲ್ಲರಿಗಿಂತ ಮೇಲೆನಿಸುವನು'



ಇಂಥ ತತ್ವವನ್ನೇ ನಮ್ಮ ಪುರಾಣ -- ಪುಣ್ಯಗ್ರಂಥಗಳೂ ಸಾರುತ್ತವೆ. ಸಂತ ತುಳಸೀದಾಸರು 'ರಾಮ ಚರಿತಮಾನಸ'ದಲ್ಲಿ ಹೇಳುವಂತೆ,

ಆಕರ್ ಚಾರಿ ಲಾಖ್ ಚೌರಾಸೀ
ಜಾತಿ ಜೀವ ಜಲ ಥಲ ನಭ ಬಾಸೀ
ಸೀಯ ರಾಮ್ ಮಯ ಸಬ್ ಜಗ್ ಜಾನೀ
ಕರುಂ ಪ್ರಣಾಮ್ ಜೋರಿ ಜುಗ್ ಪಾನೀ

"ನೆಲ -- ಜಲ -- ಆಕಾಶಗಳಲ್ಲಿ ವಾಸಿಸುವ ಲಕ್ಷಾಂತರ ಜೀವಜಂತುಗಳೆಲ್ಲವೂ ಸೀತಾರಾಮರ ಅಂಶದಿಂದಲೇ ತುಂಬಿವೆ. ತನ್ಮೂಲಕ ಜಗತ್ತಿನೆಲ್ಲೆಡೆ ತುಂಬಿಕೊಂಡಿರುವ ಸೀತಾಸಹಿತ ಶ್ರೀರಾಮನನ್ನು ನಾನು ನಮಸ್ಕರಿಸುತ್ತೇನೆ".

ಜಗವೇ ಒಂದು ಕುಟುಂಬವೆಂಬ ಮಾತಿಗೆ ಅತ್ಯಂತ ಸ್ಪಷ್ಟವಾದ ಸಾಕ್ಷ್ಯ ವಿಷ್ಣುಪುರಾಣದಲ್ಲಿ ನಮಗೆ ಲಭ್ಯವಾಗುತ್ತದೆ. ಪಿತೃಗಳಿಗೂ, ಪೂರ್ವಜರಿಗೂ ತರ್ಪಣ ನೀಡುವ ಸಂದರ್ಭದಲ್ಲಿ ಸಮಸ್ತ ಜೀವಜಾಲವನ್ನೇ ತೃಪ್ತಿಪಡಿಸುವ ಪ್ರಯತ್ನ ಮಾಡಲಾಗುತ್ತದೆ.

ದೇವಾಸುರಸ್ತಥಾ ಯಕ್ಷಾ
ನಾಗ ಗಂಧರ್ವ ರಾಕ್ಷಸಾಃ
ಪಿಶಾಚಾ ಗುಹ್ಯಕಾಃ ಸಿದ್ಧಾಃ
ಕೂಷ್ಮಾಂಡಾಃ ಪಶವಃ ಖಗಾಃ
ಜಲೇಚರಾ ಭೂನಿಲಯಾ
ವಾಯ್ವಾಹಾರಶ್ಚ ಜಂತವಃ
ತೃಪ್ತಿ ಮೇತೇನ ಯಾಂ ತ್ವಾಶು
ಮದ್ದತ್ತೇನಾಂಬುನಾಖಿಲಾಃ
ನರಕೇಷು ಸಮಸ್ತೇಷು
ಯಾತನಾಸು ಚ ಯೇ ಸ್ಥಿತಾಃ
ತೇಷಾಮಾಪ್ಯಾಯನಾಯ್ಯೈ
ತತ್ ಈಯತೇ ಸಲಿಲಂ ಮಯಾ
ಯೇ ಬಾಂಧವಾಬಾಂಧವಾ ವಾ
ಯೇಽನ್ಯ ಜನ್ಮನಿ ಬಾಂಧವಾಃ
ತೇ ತೃಪ್ತಿ ಮಖಿಲಾಯಾಂತು
ಯೇ ಅಸ್ಮತ್ತೋಯಕಾಂಕ್ಷಿಣಃ
ಯತ್ರ ಕ್ವಚನ ಸಂಸ್ಥಾನಾಂ
ಕ್ಷುತ್ತೃಷ್ಣೋಪಹತಾತ್ಮನಾಮ್





# ಶ್ರೀ ಪದ್ಮಾವತೀ ಅಮ್ಮನವರ ದೇವಾಲಯ

## ತಿರುಚಾನೂರು

*ಅಲಮೇಲು ಮಂಗಾಪುರವೆಂದು ಹೆಸರಾದ ಈ ಊರು ತಿರುಪತಿಯಿಂದ ನಾಲ್ಕು ಮೈಲು ದೂರದಲ್ಲಿದೆ. ತಿರುಮಲೆಯ ದರ್ಶನವಾದ ಮೇಲೆ ಈ ಊರನ್ನು ದರ್ಶಿಸಿ ಪೂರ್ಣಕಾಮರಾಗುವುದು ಪರಂಪರೆ.*

### ಆಲಯ ಕಾರ್ಯಕ್ರಮ.

| | |
|---|---|
| *ಸುಪ್ರಭಾತ* | *ಬೆಳಗ್ಗೆ 5--00 ಗಂಟೆಗೆ* |
| *ಸಹಸ್ರನಾಮಾರ್ಚನೆ* | *ಬೆಳಗ್ಗೆ 5--30 ಗಂಟೆಗೆ* |
| *(ರೂ 6--00 ಶುಲ್ಕದಿಂದ ನಾಲ್ಕು ಮಂದಿಗೆ ಪ್ರವೇಶ)* | |
| *1ನೇ ಗಂಟೆ* | *ಬೆಳಗ್ಗೆ 6--00 ಗಂಟೆಗೆ* |
| *ಸರ್ವದರ್ಶನ* | *ಬೆಳಗ್ಗೆ 6--30 ಗಂಟೆಗೆ* |
| *ಶುದ್ಧಿ 2ನೇ ಗಂಟೆ* | *ಬೆಳಗ್ಗೆ 11--30 ಗಂಟೆಗೆ* |
| *ಸರ್ವದರ್ಶನ* | *ಮಧ್ಯಾಹ್ನ 12--00 ಗಂಟೆಗೆ* |
| *3ನೇ ಗಂಟೆ* | *ಸಂಜೆ 6--00 ಗಂಟೆಗೆ* |
| *ಸರ್ವದರ್ಶನ* | *ಸಂಜೆ 6--30 ಗಂಟೆಗೆ* |
| *ಶುದ್ಧಿ* | *ರಾತ್ರಿ 8--45 ಗಂಟೆಗೆ* |
| *ಏಕಾಂತ* | *ರಾತ್ರಿ 9--00 ಗಂಟೆಗೆ* |

### ಶುಕ್ರವಾರಗಳಲ್ಲಿ

| | |
|---|---|
| *ಅಭಿಷೇಕ* | *ಬೆಳಗ್ಗೆ 9--00 ಗಂಟೆಗೆ* |
| *(ರೂ. 100/-- ಶುಲ್ಕದಿಂದ ಒಬ್ಬರಿಗೆ ಪ್ರವೇಶ)* | |
| *(ಅಭಿಷೇಕಾನಂತರ ದರ್ಶನ ಒಬ್ಬರಿಗೆ ರೂ 5/--)* | |
| *ಎರಡನೇ ಗಂಟೆ* | *ಬೆಳಗ್ಗೆ 11--00 ಗಂಟೆಗೆ* |
| *ಸರ್ವದರ್ಶನ* | *ಬೆಳಗ್ಗೆ 11--30 ಗಂಟೆಗೆ* |
| *ಊಂಜಲ್‌ಸೇವೆ* | *ಸಂಜೆ 7--00 ಗಂಟೆಗೆ* |
| *(ಮುಕುರ ಮಂಟಪದಲ್ಲಿ, ಶುಲ್ಕ ರೂ 150/--)* | |
| *(5 ಗ್ರಾಂಗಳ ಬೆಳ್ಳಿಯ ಪದಕ ಬಹುಮಾನ ಉಂಟು)* | |
| *3ನೇ ಗಂಟೆ* | *ರಾತ್ರಿ 8--00 ಗಂಟೆಗೆ* |
| *ಸರ್ವದರ್ಶನ* | *ರಾತ್ರಿ 8--30 ಗಂಟೆಗೆ* |
| *ಶುದ್ಧಿ* | *ರಾತ್ರಿ 9--30 ಗಂಟೆಗೆ* |
| *ಏಕಾಂತಸೇವೆ* | *ರಾತ್ರಿ 9--45 ಗಂಟೆಗೆ* |

**ಪೇಷ್ಕಾರ್.**

ಇದಮಾಪ್ಯಾಯನಾಯಾಸ್ತು.
ಮಯಾ ದತ್ತಂ ತಿಲೋದಕಮ್

"ದೇವತೆಗಳು, ಅಸುರರು, ಯಕ್ಷರು, ನಾಗರು, ಗಂಧರ್ವರು, ರಾಕ್ಷಸರು, ಪಿಶಾಚಿಗಳು, ಗುಹ್ಯಕರು, ಸಿದ್ಧರು, ಕೂಷ್ಮಾಂಡರು, ಪಶುಗಳು, ಪಕ್ಷಿಗಳು, ಜಲಚರ -- ಭೂಚರಗಳು, ವಾಯುಭಕ್ಷಕರು, ಜಂತುಗಳು -- ಎಲ್ಲರೂ ನಾನು ಕೊಡುತ್ತಿರುವ ಈ ತಿಲಾಂಜಲಿಯಿಂದ ತೃಪ್ತಿ ಹೊಂದಲಿ. ಎಲ್ಲ ನರಕದಲ್ಲಿ ಬಗೆಬಗೆಯ ಯಾತನೆಗಳನ್ನು ಅನುಭವಿಸುತ್ತಿರುವವರ ಸಂತಸಕ್ಕಾಗಿಯೂ ನಾನು ಈ ಜಲವನ್ನು ನೀಡುತ್ತಿದ್ದೇನೆ. ತನ್ನ ಬಾಂಧವರೂ, ಬಾಂಧವರಲ್ಲದವರೂ, ಇತರ ಜನ್ಮಗಳಲ್ಲಿ ಬಂಧುಗಳಾಗಿದ್ದವರೂ, ಜತೆಗೆ ಜಲಕ್ಕಾಗಿ ಕಾತರಿಸುತ್ತಿರುವವರೆಲ್ಲ ಇದರಿಂದ ಸಂತೃಪ್ತರಾಗಲಿ. ಎಲ್ಲೇ ಆಗಲಿ, ಹಸಿವು -- ದಾಹಗಳಿಂದ ತಪ್ತರಾಗಿರುವವರಿದ್ದರೆ ಅವರೂ ನನ್ನಿಂದ ಕೊಡಲ್ಪಟ್ಟ ಈ ತಿಲೋದಕದಿಂದ ಸಂತುಷ್ಟಿಪಡೆಯಲಿ."

ಈ ಪ್ರಾರ್ಥನೆ, ಪ್ರಪಂಚದ ಸಕಲ ಚರಾಚರ ಜೀವಿಗಳಿಗೂ, ಆತ್ಮಗಳಿಗೂ ಆನಂದ - - ಆಪ್ಯಾಯತೆಗಳ ಅನುಭೂತಿಯನ್ನು ಒದಗಿಸುವ ಮಾತನ್ನಾಡುವುದರಿಂದಾಗಿ ಜಗದ ಪಿತನಾದ ಶ್ರೀವಿಷ್ಣುವಿಗೂ ಸಂತೋಷವನ್ನು ಕೊಡುತ್ತದೆ. ತರ್ಪಣ ನೀಡಿದ ಮನುಜನಿಗೂ ತೃಪ್ತಿಯನ್ನು ನೀಡುತ್ತದೆ.

ಅಂಥ ಕಾರ್ಯಗಳನ್ನೇ ನಮ್ಮ ಹಿಂದಿನ ಋಷಿಮುನಿಗಳೂ ಮಾಡುತ್ತಿದ್ದುದು. ತಮ್ಮ ತಪಶ್ಶಕ್ತಿಯನ್ನು ಲೋಕದ ಜೀವಿಗಳ ಒಳಿತಿಗಾಗಿ ವಿನಿಯೋಗಿಸುವ ಹೊಣೆ ಅವರ ಮೇಲಿತ್ತು. ಹಾಗಾಗಿಯೇ "ಲೋಕಾಃ ಸಮಸ್ತಾಃ ಸುಖಿನೋಭವಂತು" ಎಂಬುದು ಭಾರತೀಯ ಸಂಸ್ಕೃತಿಯ ಧ್ಯೇಯವಾಕ್ಯವಾಯ್ತು.

ಸರ್ವೇ ಭವಂತು ಸುಖಿನಃ
ಸರ್ವೇ ಸಂತು ನಿರಾಮಯಾಃ
ಸರ್ವೇ ಭದ್ರಾಣಿ ಪಶ್ಯಂತು
ಮಾ ಕಶ್ಚಿದ್ ದುಃಖ ಭಾಗ್ಭವೇತ್

"ಎಲ್ಲರೂ ಸುಖಿಗಳಾಗಿರಲಿ. ಎಲ್ಲರೂ ಆರೋಗ್ಯವಂತರಾಗಿರಲಿ. ಎಲ್ಲರೂ ಸದಾ ಶುಭವನ್ನು ಹೊಂದಲಿ. ಯಾರೂ ಎಲ್ಲೂ ದುಃಖಭಾಜನರಾಗದಿರಲಿ" -- ಹೀಗೆ ನಮ್ಮ ಪ್ರಾರ್ಥನೆ ಸಾಗುತ್ತದೆ ಎಂದರೆ, ವಿಶ್ವದೆಲ್ಲರೂ ನಮ್ಮ ಸಂಬಂಧಿಗಳು, ವಸುಧಯಿಡೀ ಒಂದು ಕುಟುಂಬ -- ಎಂದೇ ಅರ್ಥವಲ್ಲವೆ?

# ಅಕ್ಕನ ವಚನಗಳಲ್ಲಿ ಮಾಯೆ

---ಸಾಲೀಮಠ ದೊಡ್ಡಯ್ಯಶಾಸ್ತ್ರಿ

ಶರಣಸಾಹಿತ್ಯಕ್ಕೆ ಮಹಾದೇವಿ ಅಕ್ಕನವಚನ ಗಳು ಅನುಪಮ ಕೊಡುಗೆಯಾಗಿವೆ. ಶಿವಶರಣೆ ಮಹಾದೇವಿ ಅಕ್ಕನ ವಚನಗಳಲ್ಲಿ ಉಕ್ಕಿಬಂದ ಉತ್ಕಟತೆ, ಭಾವಪೂರ್ಣಭಕ್ತಿ, ಚೆನ್ನಮಲ್ಲಿಕಾರ್ಜುನನನ್ನೇ ಗೆಲ್ಲದೇಕೆಂಬ ಛಲ, ಆಶೆ ಆಮಿಷಗಳೊಂದಿಗೆ ಸೆಣಸಾಡುತ್ತಿರುವ ಮಾನವ ಕೋಟಿಯಬಗ್ಗೆ ಅಪಾರ ಕರುಣೆ, ಅನುಕಂಪಗಳು ಮೂಡಿಬಂದಿವೆ. ಅವಳ ವಚನಗಳು ಅಪಾರ ಸಾಹಿತ್ಯಕ ಮೌಲ್ಯವನ್ನೂ ಹೊಂದಿವೆ. ಮಹಾದೇವಿ ಅಕ್ಕನ ವಚನಗಳಲ್ಲಿ ಮಾಯೆ'ಯ ಕಲ್ಪನೆ ಸಹಜವಾಗಿಯೂ, ಸುಂದರವಾಗಿಯೂ ವ್ಯಕ್ತಗೊಂಡಿದೆ. ಅಲ್ಲದೇ ನಿಗೂಢವಾದ ದಾರ್ಶನಿಕ ವಿಚಾರವನ್ನು ತಿಳಿಯಾಗಿ ಸಾದರಪಡಿಸುವ ಈ ಮಹಾಶರಣೆಯ ಪಾಂಡಿತ್ಯಕ್ಕೆ ಚಿರ ಸಾಕ್ಷಿಯಾಗಿವೆ.

ಸಮಗ್ರಭೂಮಂಡಲವನ್ನೇ ಮಂಜಿನಂತೆ ಮುಸುಕಿದ ಮಾಯೆ ಸರ್ವಾಂತರ್ಯಾಮಿಯಾಗಿದೆ. ಮಾಯೆ ಕಾಡದ ಮನುಜ ಇನ್ನೂ ಜನಿಸಿಬಂದಿಲ್ಲ. ಈ ಮಾಯೆ ದೇವನೊಡ್ಡಿದಜಾಲ. ದೇವನೊಡ್ಡಿದ ಈ ಮಾಯೆಯನ್ನು ಗೆಲ್ಲುವರಾರು? ಅಂತೆಯೇ.

ಕಾಯಕ್ಕೆ ನೆಳಲಾಗಿ ಕಾಡಿತ್ತುಮಾಯೆ,
ಪ್ರಾಣಕ್ಕೆ ಮನವಾಗಿ ಕಾಡಿತ್ತು ಮಾಯೆ,
ಮನಕ್ಕೆ ನೆನೆಹಾಗಿ ಕಾಡಿತ್ತು ಮಾಯೆ,
ಜಗದ ಜಂಗುಳಿಗಳಿಗೆ ಬೆಂಗೋಲ ನೆತ್ತಿ ಕಾಡಿತ್ತು ಮಾಯೆ,
ಚೆನ್ನ ಮಲ್ಲಿಕಾರ್ಜುನಾ,
ನೀನೊಡ್ಡಿದ ಮಾಯೆಯ ನಾರೂಗೆಲ್ಲರಾರರು!

ಈ ಮಾಯೆ ನೂರುಕೋಟಿ ಜೀವತಂತುಗಳನ್ನು ನುಂಗಿ ನಿಂತ ದೈತ್ಯ. ಅಷ್ಟೇಕೆ, ಇಂದ್ರಚಂದ್ರರನ್ನೂ ಇದು ಕಾಡದೇ ಬಿಟ್ಟಿಲ್ಲ. ಮಾಯೆಯ ಶಕ್ತಿ ಅಪಾರ. ಇದನ್ನು ಗೆಲ್ಲುವುದು ಅಸಾಮಾನ್ಯವಾದರೂ ಅಸಾಧ್ಯದ ಕಾರ್ಯವೇನಲ್ಲ. ಇದನ್ನು ಜಯಿಸಲು ಈ ಮಾಯೆಯನ್ನು ಸೃಷ್ಟಿಸಿದ ಚೆನ್ನ ಮಲ್ಲಿಕಾರ್ಜುನನಿಗೆ ಶರಣು ಹೋಗುವದೊಂದೇ ದಾರಿ. ಈ ದೇವನ ಕರುಣೆ, ಕೃಪಾಕಟಾಕ್ಷದಿಂದಲೇ ನಮಗೆ ಮಾಯೆಯಿಂದ ವಿಮುಕ್ತಿ. ಕರುಣಾಮಯಿಯಾದ ಚೆನ್ನಮಲ್ಲಿಕಾರ್ಜುನ ತನ್ನನ್ನೇ ನಂಬಿದ ಭಕ್ತರನ್ನು ಈ "ನುಂಗಿನಿಂತ" ದೈತ್ಯರಿಂದ ರಕ್ಷಿಸಬಲ್ಲ.

ಹರಿಯನುಂಗಿತ್ತು ಮಾಯೆ,
ಅಜನನುಂಗಿತ್ತು ಮಾಯೆ,
ಇಂದ್ರನ ನುಂಗಿತ್ತು ಮಾಯೆ,
ಚಂದ್ರನ ನುಂಗಿತ್ತು ಮಾಯೆ,
ಬಲ್ಲೆನೆಂಬ ಬಲುಗೈಯರ ನುಂಗಿತ್ತು ಮಾಯೆ,
ಅರಿಯನೆಂಬ ಅಜ್ಞಾನಿಗಳ ನುಂಗಿತ್ತು ಮಾಯೆ,
ಈರೇಳು ಭುವನವನಾರಡಿಗೊಂಡಿತ್ತು ಮಾಯೆ,
ಚೆನ್ನಮಲ್ಲಿಕಾರ್ಜುನಯ್ಯಾ
ಎನ್ನಮಾಯವ ಮಾಣಿಸ್ವಾ ಕರುಣಿ!

ಅಂತೆಯೇ ಮಹಾದೇವಿ ಅಕ್ಕನಿಗೆ ಚೆನ್ನಮಲ್ಲಿಕಾರ್ಜುನನನ್ನೇ ಗೆಲ್ಲದೇಕೆಂಬ ಛಲ. ಅವನನ್ನೇ ಗೆದ್ದರೆ ಅವನು ಸೃಷ್ಟಿಸಿದ ಮಾಯೆಯನ್ನು ಗೆಲ್ಲಲಾರೆನೇ-- ಈ ದೇವನನ್ನು ಗೆಲ್ಲಲು ಶಿವಶರಣೆಗೆ ಭಕ್ತಿಯೇ ಮಾರ್ಗ. ಆ ಮಾರ್ಗದಲ್ಲಿ ಮುನ್ನಡೆದ ಮನುಜನಿಗೆ ಮಾಯೆಯನ್ನೇ ಮೆಟ್ಟಿನಿಂತು ದೇವನೊಡನೆ ಐಕ್ಯವಾಗುವ ಅಪೂರ್ವ ಸುಯೋಗ. ಮಹಾದೇವಿ ಅಕ್ಕನ ವಚನಗಳಲ್ಲಿ ಈ ಭಾವನೆ ಪ್ರಕಟಗೊಂಡಿದೆ. ಪ್ರಾಂಜಲ ಮನಸ್ಸಿನಿಂದ ಚೆನ್ನಮಲ್ಲಿಕಾರ್ಜುನನನ್ನು ಭಕ್ತಿಯಿಂದ -- ಪೂಜಿಸಿದರೆ ಮಾಯೆಯ ಮಂಜು ತಾನಾಗಿಯೇ ಕರಗಿ ಹೋಗುವುದು. ಹಾಗಿದ್ದರೂ ಮಾಯೆ ಬಿಡಿಸಲಾರದ ಗಂಟು. ತ್ಯಜಿಸಲಾರದ ಅಂಟುರೋಗ. "ಬಿಟ್ಟೆ

ನೆಂದರೆ ಬಿಡದೀ ಮಾಯೆ, ಬಿಡದಿದ್ದರೆ ಬೆಂಬತ್ತಿತ್ತು ಮಾಯೆ" ಅಂತೆಯೇ ಇಹಲೋಕವನ್ನು ತ್ಯಜಿಸಿ ವೈರಾಗ್ಯಹೊಂದಿದ ಯೋಗಿಗೂ ಈ ಮಾಯೆ ಬಾಧಿಸದೆ ಬಿಟ್ಟಿಲ್ಲ. ಆದರೆ ಮಹಾದೇವಿ ಅಕ್ಕ ಈ ಮಾಯೆಗೆ ಅಂಜುವ ಅಳುಕುವ ಅಬಲೆಯಲ್ಲ.

"ನಿನ್ನ ಮಾಯೆಗೆ ನಾನಂಜುವವಳಲ್ಲ. ಚೆನ್ನಮಲ್ಲಿಕಾರ್ಜುನ ದೇವಾ, ನಿಮ್ಮಾಣೆ" ಎಂದು ದೇವನಿಗೆ ಪ್ರತಿಸವಾಲು ಹಾಕುವ ಧೀರೋದಾತ್ತ -- ಮನೋಭಾವ ಅವಳದು. ಮಾಯೆ ಜನ್ಮಕ್ಕೆ ಅಂಟಿಕೊಂಡು ಬಂದ ಕರ್ಮ. ಈ ಕರ್ಮದ ಸೆರೆಯನ್ನು ಬಿಡಿಸಲು ಚೆನ್ನಮಲ್ಲಿಕಾರ್ಜುನನೊಬ್ಬನಿಗೇ ಸಾಧ್ಯ, ಕಾಯುವವನೊಬ್ಬನೇ ಅವನು. ಅವನಿಗೆ ಶರಣು ಹೋಗುವುದೊಂದೇ ಗತಿ.

ಅಲ್ಲೆಂದಡೆ ಉಂಟೆಂಬುದೀ ಮಾಯೆ!
ಒಲ್ಲೆನೆಂದಡೆ ಬಿಡದೀ ಮಾಯೆ;
ಎನಗಿದು ವಿಧಿಯೆ!
ಚೆನ್ನಮಲ್ಲಿಕಾರ್ಜುನಯ್ಯಾ
ಒಪ್ಪಿ ಮೊರೆವೊಕ್ಕಡೆ ಮತ್ತುಂಟೆ?
ಕಾಯಯ್ಯಾ ಶಿವಧೋ!

ಈ ಮಾಯೆಯ ಪರಿಸರದಲ್ಲಿ ಬೆಳೆದ ಜೀವಾತ್ಮದ ಕೊರಗನ್ನು ಆ ಚೆನ್ನಮಲ್ಲಿಕಾರ್ಜುನನೇ ಕೇಳಬೇಕು. ಗಾಢಾಂಧಕಾರದಲ್ಲಿ ದಿಕ್ಕುದೋರದೆ ಸಂಸಾರನೌಕೆಯಲ್ಲಿ ಸಾಗುವವನಿಗೆ ದೇವನೇ ಬೆಳಕು.

ಎನ್ನಮಾಯದ ಮದವ ಮುರಿಯಯ್ಯಾ
ಎನ್ನಕಾಯದ ಕತ್ತಲೆಯ ಕಳೆಯಯ್ಯಾ
ಎನ್ನ ಜೀವದ ಜಂಜಡವ ಮಾಣಿಸಯ್ಯಾ
ಎನ್ನ ದೇವ ಚೆನ್ನಮಲ್ಲಿಕಾರ್ಜುನಯ್ಯಾ
ಎನ್ನ ಸುತ್ತಿದ ಪ್ರಪಂಚವ ಬಿಡಿಸಾನಿಮ್ಮ ಧರ್ಮ!

ಈ ಮಾಯೆಯನ್ನು ಗೆಲ್ಲುವುದೊಂದು ತಪಸ್ಸೇ ಸರಿ. ಅಪಾರ ಶ್ರದ್ಧೆಯಿಂದ -- ದೇವರೆಡೆಗೆ ಮುನ್ನಡೆಯುವಾಗ ಮಾಯೆಯನ್ನು ದೇವನೇ ಪರೀಕ್ಷಿಸುತ್ತಾನೆ. ಆಗಲೂ ಕಾಯಬೇಕಾದವನು ಚೆನ್ನಮಲ್ಲಿಕಾರ್ಜುನನೇ.

ನೋಡಿಹೆನೆಂದರೆ ದೃಷ್ಟಿ ಮರೆಯಾಯಿತ್ತು
ಕೂಡಿಹೆನೆಂದರೆ ಭಾವ ಮರೆಯಾಯಿತ್ತು
ಏನೆಂದೆ ನೆಂತೆಂಬೆನಯ್ಯಾ?
ಅರಿದಿಹನೆಂದರೆ ಮರಹು ಮರೆಯಾಯಿತ್ತು
ನಿನ್ನ ಮಾಯೆಯ ನೆಲೆಗಳವಡೆ ಎನ್ನಳವೆ?
ಕಾಯಯ್ಯಾ ಚೆನ್ನಮಲ್ಲಿಕಾರ್ಜುನಾ.

ಈ ಮಾಯಾಯೆಯ ಸೆರೆಯಿಂದ ವಿಮೋಚನೆ ಹೊಂದಲು ಸರ್ವತ್ಯಾಗಕ್ಕೂ ಸಿದ್ಧವಾಗಬೇಕು. ಇದಕ್ಕಾಗಿ ಆತ್ಮಾಹುತಿಯನ್ನು ನೀಡಬೇಕಾಗುವುದು. ವಿವಿಧ ರೀತಿಯಿಂದ ಕಾಡುವ ಈ ಮಾಯೆ ಜೀವಾತ್ಮವನ್ನು ಬಿಡದಂತೆ ಅಂಟಿಕೊಂಡಿದೆ.

ಎನ್ನ ಕಾಯ ಮಣ್ಣು, ಜೀವಬಯಲು
ಆವುದ ಹಿಡಿವೆನೆಯ್ಯಾ ದೇವ!
ನಿಮ್ಮನಾವಪರಿಯಲ್ಲಿ ನೆನೆವೆನಯ್ಯಾ?
ಎನ್ನಮಾಯೆಯನು ಮಾಣಿಸಯ್ಯಾ
ಚೆನ್ನಮಲ್ಲಿಕಾರ್ಜುನಾ.

ಈ ಮಾಯೆಯ ಜಾಲದಲ್ಲಿ ಬಿದ್ದ ಮಾನವ ಜೇಡರ ಬಲೆಯಲ್ಲಿ ಸಿಕ್ಕ ಹುಳುವಿನಂತೆ ವಿಲಿವಿಲಿ ಒದ್ದಾಡುತ್ತಾನೆ. ಬರೀ ಮಾನವರಷ್ಟೇ ಅಲ್ಲ -- ಯೋಗಿಗಳೂ, ಋಷಿಮುನಿಗಳೂ ಇದಕ್ಕೆ ಹೊರತಾಗಿಲ್ಲ. ಮಾಯೆ ಕಾಡದ ಜೀವವಿಲ್ಲ. ಪರಿಶುದ್ಧ ಆತ್ಮವು ದೇವನಲ್ಲಿ ವಿಲೀನವಾಗುವಾಗ ಪರಿಪರಿಯಾಗಿ ಮಾಯೆಯು ಕಾಡುವುದನ್ನು ಮಹಾದೇವಿ ಅಕ್ಕನು ಮನಂಬುಗುವಂತೆ ಚಿತ್ರಿಸಿದ್ದಾಳೆ. ಭಕ್ತಿಮಾರ್ಗದಲ್ಲಿ ಹಂತಹಂತವಾಗಿ ಮೇಲೇರುವ ಶಿವಶರಣರಿಗೆ ದೇವನೊಡ್ಡುವ ಪರೀಕ್ಷೆಗಳು ಅನೇಕ. ಈ ಪರೀಕ್ಷೆಗಳನ್ನುನೆರವೇರಿಸುವವನು -- ದೇವನೇ. ಆ ದೇವನ ನೂರೆಂಟು ಲೀಲೆಗಳನ್ನು ನೆರವೇರಿಸುವ ಮಾಟಗಾರ. ಮಾಯೆಯನ್ನು ಎದುರಿಸಿ ಗೆದ್ದವನು ದೇವನ ಪರೀಕ್ಷೆಯಲ್ಲಿ ಗೆದ್ದಂತೆ. ಮಹಾದೇವಿ ಅಕ್ಕನ -- ವಚನಗಳಲ್ಲಿಯ ಈ ವಿಚಾರಧಾರೆ ತಿಳಿಯಾಗಿ ಸ್ಫುಟವಾಗಿ ವ್ಯಕ್ತವಾಗಿದೆಯಲ್ಲದೆ ಅಜ್ಞಾನದ ಅಂಧಕಾರದಲ್ಲಿ ಮುಳುಗಿದ ಮಾನವ ಜನಾಂಗಕ್ಕೆ ಶಾಶ್ವತವಾದ ನಂದಾದೀಪವಾಗಿದೆ.


*Statement about ownership and other particulars about*

**SAPTHAGIRI**

(MONTHLY)

FORM IV

*See Rule 8*

| | | |
|---|---|---|
| 1. Place of Publication | ... | TIRUPATI |
| 2. Periodicity of its Publication | ... | Monthly |
| 3. Honorary Editor | ... | Sri D.V.L.N. Murthy, I.A.S. Executive Officer, TTD. |
| 4. Printer's Name | ... | Sri M. Vijayakumar Reddy, L.P.T. |
| Whether citizen of India | ... | Yes |
| Address | ... | Manager, T.T.D. Printing Press, Tirupati |
| 5. Editor & Publisher's Name | ... | Sri K. Subba Rao, M.A. |
| Whether citizen of India | ... | Yes |
| Address | ... | Editor, Sapthagiri T.T.D. Journal, Tirupati |
| 6. Name and addresses of individuals who own the Newspaper and partners or shareholders holding more than one per cent of the total capital | | Board of Trustees represented by the Executive Officer on behalf of T.T.D., Tirupati |

*I, K. Subba Rao, hereby declare that the particulars given above are true to the best of my knowledge and belief.*

TIRUPATI

*Date: 28-2-1993*

*(Sd.) K. SUBBA RAO,*
*Signature of the publisher*



# ವಾರ್ತಾಲಹರಿ



## ವಿಶೇಷ ಪ್ರಾಧಿಕಾರದ ನಿರ್ಣಯಗಳು

ತಿರುಪತಿ ನಗರದ ಒಳಚರಂಡಿ ವ್ಯವಸ್ಥೆಯ ನಿರ್ಮಾಣಕ್ಕಾಗಿ ತಿ.ತಿ. ದೇವಸ್ಥಾನಗಳು ಹನ್ನೆರಡು ಕೋಟಿ ರೂಪಾಯಿಗಳನ್ನು ನೀಡಲು ತೀರ್ಮಾನಿಸಲಾಗಿದೆ.

ತಿ.ತಿ.ದೇ. ವಿಶೇಷ ಪ್ರಾಧಿಕಾರದ (ಸ್ಪೆಸಿಫೈಡ್ ಅಥಾರಿಟಿ) ಸಮಾವೇಶದಲ್ಲಿ ಈ ನಿರ್ಣಯವನ್ನು ಕೈಗೊಳ್ಳಲಾಯಿತೆಂದು ಪತ್ರಕರ್ತರೊಡನೆ ಮಾತನಾಡುತ್ತ ತಿ.ತಿ. ದೇ. ಕಾರ್ಯನಿರ್ವಹಣಾಧಿಕಾರಿ ಶ್ರೀ ಡಿ.ವಿ.ಎಲ್.ಎನ್. ಮೂರ್ತಿ ಅವರು ತಿಳಿಸಿದರು.

ಸರ್ಕಾರದ ಅನುಮೋದನೆಯ ನಂತರ ಈ ಕೆಲಸವನ್ನು ಸಾರ್ವಜನಿಕ ಆರೋಗ್ಯ ಇಲಾಖೆಯು ಕೈಗೆತ್ತಿಕೊಳ್ಳುವುದೆಂದು ಅವರು ತಿಳಿಸಿದರು.

ತಿ.ತಿ.ದೇ. ಕೈಗೆತ್ತಿಕೊಂಡು ನಿರ್ಮಿಸುತ್ತಿರುವ, ಆರಂಭವಾಗಲು ಸಿದ್ಧವಾಗಿರುವ, ತಿರುಪತಿಯಲ್ಲಿನ ಸೂಪರ್ ಸ್ಪೆಷಾಲಿಟಿ ಆಸ್ಪತ್ರೆಯ (ಎಸ್.ವಿ.ಐ.ಎಂ.ಎಸ್.) ಪ್ರಗತಿಯನ್ನು ಪರಿಶೀಲಿಸಿ ಮುಂದಿನ ಎರಡು ವರ್ಷಗಳಿಗಾಗಿ ವರ್ಷಕ್ಕೆ 2.5 ಕೋಟಿ ರೂಗಳಂತೆ ಕೂಡುವೆಚ್ಚವನ್ನು ಬಿಡುಗಡೆ ಮಾಡಲು ತೀರ್ಮಾನಿಸಲಾಯಿತು. ಎಸ್.ವಿ.ಐ.ಎಂ.ಎಸ್.ನ ಮೌಲಿಕ ವೆಚ್ಚವನ್ನು 25 ಕೋಟಿ ರೂಗಳಿಗೆ ಮಿತಗೊಳಿಸಲು ತೀರ್ಮಾನಿಸಲಾಯಿತು ಎಂದೂ ಅವರು ತಿಳಿಸಿದರು. ಇತರತ್ರ ಉತ್ತರೋತ್ತರ ಅಭಿವೃದ್ಧಿಗಾಗಿ ನೂತನ ಆರೋಗ್ಯ ಯೋಜನೆಯೊಂದನ್ನು ಏರ್ಪಡಿಸಿ ದಾನಗಳನ್ನು ಆಕರ್ಷಿಸಲು ನಿರ್ಣಯಿಸಲಾಗಿದೆ.

ಹೆಚ್ಚುತ್ತಿರುವ ನಿರ್ವಹಣಾ ವೆಚ್ಚಗಳಿಂದಾಗಿ ಶ್ರೀನಿವಾಸ ಮಂಗಾಪುರ, ತಿರುಚಾನೂರು ರಸ್ತೆ, ತಿರುಪತಿಗಳಲ್ಲಿನ ಕಲ್ಯಾಣ ಮಂಟಪಗಳ ದಿನವಹಿ ಬಾಡಿಗೆಯನ್ನು ಹೆಚ್ಚಿಸಲು ತೀರ್ಮಾನಿಸಲಾಗಿದೆ. ತಿರುಚಾನೂರು ರಸ್ತೆಯ ಶ್ರೀನಿವಾಸ ಕಲ್ಯಾಣ ಮಂಟಪಗಳ ಬ್ಲಾಕ್ 1 ಹಾಗೂ ಬ್ಲಾಕ್ 2 ಗಳಿಗೆ ಪ್ರತಿನಿತ್ಯದ ನೂತನ ಬಾಡಿಗೆ ಎರಡು ಸಾವಿರದ ಐದು ನೂರು ರೂಗಳಾಗಿರುವುದು.

ತಿರುಮಲೆಯಲ್ಲಿ ಸ್ವಾಮಿಯ ಕಲ್ಯಾಣೋತ್ಸವದ ಆರ್ಜಿತ ಸೇವಾಶುಲ್ಕವನ್ನು ರೂ. ಎರಡುಸಾವಿರದಿಂದ ರೂ. ಎರಡುಸಾವಿರದ ಐದು ನೂರಕ್ಕೆ ಏರಿ

ಓದಿರಿ. ಓದಿಸಿರಿ.

# ಸಪ್ತಗಿರಿ

ತಿರುಮಲೆ -- ತಿರುಪತಿ ದೇವಸ್ಥಾನಗಳ ಧಾರ್ಮಿಕ ಮಾಸಪತ್ರಿಕೆ ಸಪ್ತಗಿರಿ.

ತೆಲುಗು ತಮಿಳು ಕನ್ನಡ ಹಿಂದಿ ಆಂಗ್ಲ ಭಾಷೆಗಳಲ್ಲಿ ದೇರೆ ದೇರೆಯಾಗಿ ಪ್ರಕಟವಾಗುವ ಪತ್ರಿಕೆ.

ಆಧ್ಯಾತ್ಮಿಕ, ಸಾಂಸ್ಕೃತಿಕ, ಧಾರ್ಮಿಕ ವಿಷಯಗಳೊಂದಿಗೆ ವಿಶೇಷಗಳೊಂದಿಗೆ ಪ್ರಕಟವಾಗುವ ಪತ್ರಿಕೆ.

ಸಪ್ತಗಿರಿ ಚಂದಾದಾರರಾಗ ಬಯಸುವವರು ಈ ಕೆಳಗಿನ ಸೂಚನೆಗಳನ್ನು ಗಮನಿಸದೇಕೆಂದು ಪ್ರಾರ್ಥನೆ.

* ಸಪ್ತಗಿರಿಯ ವಾರ್ಷಿಕ ಚಂದಾ ಹನ್ನೆರಡು ರೂಪಾಯಿಗಳು ಮಾತ್ರ. ಎಷ್ಟು ವರ್ಷದ ಚಂದಾ ಹಣವನ್ನಾದರೂ ತುಂಬಬಹುದು. (ಆಜೀವ ಸದಸ್ಯತ್ವವಿಲ್ಲ)
* ತಮ್ಮ ಚಂದಾ ಹಣವನ್ನು ಸಂಪಾದಕರು, ಸಪ್ತಗಿರಿ, ತಿ.ತಿ.ದೇ. ತಿರುಪತಿ ಇವರ ಹೆಸರಿಗೆ ಎಂ.ಓ/ಡಿ.ಡಿ./ಪಿ.ಓ. ರೂಪದಲ್ಲಿ ಕಳುಹಿಸಿ (ಚೆಕ್‌ಗಳನ್ನು ಅಂಗೀಕರಿಸಲಾಗದು).
* ತಮಗೆ ಯಾವ ಭಾಷೆಯ ಸಪ್ತಗಿರಿ ದೇಕೆಂಬುದನ್ನು ಸ್ಪಷ್ಟವಾಗಿ ಬರೆಯಿರಿ.
* ತಮ್ಮ ಪೂರ್ಣ ವಿಳಾಸವನ್ನು ಬಿಡಿಬಿಡಿಯಾದ ಅಕ್ಷರಗಳಲ್ಲಿ ಸ್ಪಷ್ಟವಾಗಿ ಬರೆಯಿರಿ.
* ಚಂದಾ ಹಣ ತಲುಪಿದ ಮಾರನೆಯ ತಿಂಗಳಿನಿಂದ ಸಪ್ತಗಿರಿಯನ್ನು ಕಳುಹಿಸಲಾಗುವುದು.
* ಚಂದಾ ಹಣವನ್ನು ಕಳುಹಿಸಿದ 30 ದಿನಗಳಲ್ಲಿ ಸಪ್ತಗಿರಿ ತಮಗೆ ಬಾರದಿದ್ದಲ್ಲಿ ತಮ್ಮ ಎಂ.ಓ./ಡಿ.ಡಿ. ಕ್ರಮಸಂಖ್ಯೆ ದಿನಾಂಕ ಮೊದಲಾದ ವಿವರಗಳೊಂದಿಗೆ ಪೂರ್ಣವಿಳಾಸವನ್ನು ನೀಡಿ ಕಾಗದ ಬರೆಯಿರಿ.

ಈ ಮೊದಲೇ ಚಂದಾದಾರರಾದವರಿಗೆ ಸೂಚನೆಗಳು :

* ತಮ್ಮ ಚಂದಾ ಮೊಬಲಗು ಮುಗಿಯುವ ಒಂದು ತಿಂಗಳ ಮೊದಲೇ ಪುನಃ ಚಂದಾಹಣವನ್ನು ಕಳುಹಿಸಿ ತಮ್ಮ ಸದಸತ್ಯ ಸಂಖ್ಯೆಯನ್ನು ಪುನರುದ್ಧರಿಸಿಕೊಳ್ಳಿರಿ.
* ತಮ್ಮ ವಿಳಾಸ ಬದಲಾದಾಗ, ಚಂದಾ ಹಣ ಪುನಃ ಕಳುಹಿಸುವಾಗ ಸಪ್ತಗಿರಿಗೆ ಇತರ ಕಾರಣಗಳಿಗಾಗಿ ಬರೆಯುವಾಗ ದಯವಿಟ್ಟು ತಮ್ಮ ಸದಸ್ಯತ್ವ ಸಂಖ್ಯೆಯನ್ನು ತಪ್ಪದೇ ತಮ್ಮ ವಿಳಾಸದೊಡನೆ ನಮೂದಿಸಿ ಬರೆಯಿರಿ.

ಸಂಪಾದಕರು :

**ಸಪ್ತಗಿರಿ**

ತಿ.ತಿ.ದೇ., ತಿರುಪತಿ.

**ಕೊಂಡು ಓದಿರಿ. ಕೊಂಡು ಓದಿಸಿರಿ.**

ಸಲಾಗಿದೆ. ಅದರಂತೆಯೇ ವಿಶೇಷ ಪ್ರವೇಶದ ಟಿಕೆಟ್ಟಿನ ಬೆಲೆಯನ್ನು ಇಪ್ಪತ್ತೈದು ರೂಪಾಯಿಗಳಿಂದ ಮುವತ್ತು ರೂಪಾಯಿಗಳಿಗೆ ಏರಿಸಲಾಗಿದೆ.

ನೇಪಾಳದಲ್ಲಿ ಸೀತೆಯ ಜನನ ಸ್ಥಳವಾದ ಜನಕಪುರಿಯಲ್ಲಿ ಯಾತ್ರಿನಿವಾಸದ ನಿರ್ಮಾಣಕ್ಕಾಗಿ 10 ಲಕ್ಷ ರೂಪಾಯಿಗಳನ್ನು ನೀಡಲು ತೀರ್ಮಾನಿಸಲಾಗಿದೆ.

## ಪುರಾಣಿಕ ಶಿರೋಮಣಿ ಪ್ರಮಾಣ ಪತ್ರ ವಿತರಣೆ

ತಿರುಮಲೆ ತಿರುಪತಿ ದೇವಸ್ಥಾನಗಳ ಪುರಾಣಿಕ ಶಿಕ್ಷಣ ಶಾಲೆಯಲ್ಲಿ ಕಲಿತು ಉತ್ತೀರ್ಣರಾದ ವಿದ್ಯಾರ್ಥಿಗಳಿಗೆ ಈಚೆಗೆ ಅನ್ನಮಾಚಾರ್ಯ ಕಲಾಮಂದಿರದಲ್ಲಿ ನಡೆದ ಸರಳ ಸಮಾರಂಭದಲ್ಲಿ ಪುರಾಣಿಕ ಶಿರೋಮಣಿ ಪ್ರಮಾಣ ಪತ್ರಗಳನ್ನು ವಿತರಣೆ ಮಾಡಲಾಯಿತು.

ಪ್ರಮಾಣ ಪತ್ರಗಳನ್ನು ವಿತರಿಸಿದ ತಿ.ತಿ.ದೇ. ಪೌರಸಂಬಂಧ ಶಾಖಾಧಿಕಾರಿ ಡಾ. ಆರ್. ಸೂರ್ಯನಾರಾಯಣ ಮೂರ್ತಿ ಅವರು ಸಮಾಜದಲ್ಲಿನ ಸಾರ್ವತ್ರಿಕ ಅಭಿವೃದ್ಧಿಗಾಗಿ ಹೆಚ್ಚು ಹೆಚ್ಚಿನ ವಿದ್ಯಾರ್ಥಿಗಳು ಪುರಾಣಗಳಲ್ಲಿನ ಶಿಕ್ಷಣ ಪಡೆಯುವ ಅಗತ್ಯವನ್ನು ಕುರಿತು ಒತ್ತಿ ಹೇಳುತ್ತ, ಪುರಾಣಿಕರ ಸೇವೆಯನ್ನು ಪುರಾಣಗಳ ಪ್ರಾಮುಖ್ಯತೆಯನ್ನು ತಿಳಿಯ ಹೇಳುವ ಪ್ರಚಾರ ಕಾರ್ಯದಲ್ಲಿ ಬಳಸಲು ಕ್ರಮಗಳನ್ನು ಕೈಗೊಳ್ಳಲಾಗುತ್ತಿದೆ ಎಂದು ತಿಳಿಸಿದರು.

ಎಸ್. ವಿ. ಸಂಗೀತ ನೃತ್ಯ ಕಲಾಶಾಲೆಯ ಪ್ರಾಂಶುಪಾಲ ಶ್ರೀ ನೂಕಲ ಚಿನಸತ್ಯನಾರಾಯಣ ಅವರು ಸನಾತನ ಧರ್ಮದ ಮೌಲ್ಯ ಪ್ರಸಾರದಲ್ಲಿ ಪುರಾಣಿಕರು ಪ್ರಮುಖ ಪಾತ್ರ ನಿರ್ವಹಿಸುವರೆಂದು ತಿಳಿಸುತ್ತ ಪುರಾಣಿಕ ಶಾಲೆಯ ಪ್ರಾಂಶುಪಾಲ ಶ್ರೀ ಮಲ್ಲಾದಿ ಚಂದ್ರಶೇಖರ ಶಾಸ್ತ್ರಿ ಅವರ ಅಪಾರ ಸೇವೆಯನ್ನು ಕೊಂಡಾಡಿದರು. ಕಲಾಶಾಲೆಯ ಪರವಾಗಿ ಶಾಸ್ತ್ರಿಗಳನ್ನು ಶಾಲು ಹೊದಿಸಿ ಸತ್ಕರಿಸಲಾಯಿತು.

ಮಹಾಕವಿ ಶ್ರೀ ಮುದಿವರ್ತಿ ಕೊಂಡಮಾಚಾರ್ಯುಲು, ಹರಿಕಥಾ ಕಲಾವಿದ ಶ್ರೀ ವಂಗಲ ಪಟ್ಟಾಭಿ ಭಾಗವತರ್ ಮುಂತಾದವರೂ ಭಾಗವಹಿಸಿದ್ದರು.

## ಕಲಾಭವನ ಉದ್ಘಾಟನೆ

ತಿ.ತಿ.ದೇ.ಗಳ ಶ್ರೀವೆಂಕಟೇಶ್ವರ ವಾಸ್ತು--ಶಿಲ್ಪ ಪರಂಪರಾ ಶಾಲೆಯ ಆವರಣದಲ್ಲಿ ವಿಶ್ವಕರ್ಮ

ಲಾಭವನ ಹಾಗೂ ಶಿಲ್ಪಬ್ರಹ್ಮ ಭವನಗಳ ಉದ್ಘಾಟನೆ ಈಚೆಗೆ ತಿ.ತಿ.ದೇ. ಕಾರ್ಯನಿರ್ವಹಣಾಧಿಕಾರಿ ಶ್ರೀ ಡಿ.ವಿ.ಎಲ್.ಎನ್. ಮೂರ್ತಿ ಅವರ ಅಧ್ಯಕ್ಷತೆಯಲ್ಲಿ ನಡೆಯಿತು.

ವಿಶ್ವಕರ್ಮ ಕಲಾಭವನ --3 ಲಕ್ಷ ರೂಗಳ ವೆಚ್ಚದಲ್ಲಿ ನಿರ್ಮಿತವಾಗಿದ್ದು ಅದನ್ನು ಉದ್ಘಾಟಿಸುತ್ತ ಕಾರ್ಯನಿರ್ವಣಾಧಿಕಾರಿಗಳು ಶಿಲ್ಪಗಳ ಅಧಿಕ ಸಂಖ್ಯೆಯ ನಿರ್ಯಾತದ ಅವಕಾಶವಿದೆಯೆಂದೂ, ಪರಂಪರೆಯಿಂದ ನಮಗೆ ದತ್ತವಾಗಿ ಬಂದ ವಾಸ್ತು--ಶಿಲ್ಪ ಕಲೆಯನ್ನು ಇತೋಪ್ಯತಿಶಯವಾಗಿ ಪ್ರಸಾರ ಮಾಡಬೇಕಾದ್ದು ನಮ್ಮ ಕರ್ತವ್ಯವೆಂದರು.

ತೆಲುಗು ಅಕಾಡಮಿಯ ಲಲಿತಕಲಾಪೀಠದ ಮುಖ್ಯಸ್ಥ; ಖ್ಯಾತ ಮೃದಂಗ ವಿದ್ವಾಂಸ ಶ್ರೀ ಯಲ್ಲಾ ವೆಂಕಟೇಶ್ವರ ರಾವು ಅವರು ಶಿಲ್ಪಬ್ರಹ್ಮಭವನ (ಅಂದಾಜವೆಚ್ಚ ಎರಡೂವರೆ ಲಕ್ಷ ರೂಗಳು) ವನ್ನು ಉದ್ಘಾಟಿಸುತ್ತ, ರಾಷ್ಟ್ರ ಮಟ್ಟದಲ್ಲಿ ಪರಂಪರಾಗತ ವಾಸ್ತು ಶಿಲ್ಪದ ಪರಿಪಕ್ವತೆಗೆ ಪ್ರಶಸ್ತಿ ನೀಡುವ ಯೋಜನೆಯ ಬಗ್ಗೆ ಅವಧಾರಿಸಿದರು.

ತಿ.ತಿ.ದೇ. ಪೌರಸಂಬಂಧಾಧಿಕಾರಿ ಡಾ. ಆರ್. ಸೂರ್ಯನಾರಾಯಣ ಅವರು ಮಾತನಾಡುತ್ತ ದೇವಸ್ಥಾನಗಳ ಕಾರ್ಯಕ್ರಮ ಯೋಜನೆಯಲ್ಲಿ ಪರಂಪರಾಗತ ಕಲೆಗಳ ಪರಿರಕ್ಷಣೆ ಪ್ರಸಾರ ಪರಮ ಗುರುತ್ವವನ್ನು ಪಡೆದಿದೆ ಎಂದು ವಿವರಿಸಿದರು.

ತಿ.ತಿ.ದೇ. ಗಳ ಶಿಕ್ಷಣಾಧಿಕಾರಿ ಶ್ರೀ ಜಿ. ವಿ. ರಮಣ ಅವರು ಶಾಲೆಯ ಚರಿತ್ರೆಯನ್ನು ವಿವರಿಸಿ, ಇಲ್ಲಿನ ಪ್ರತಿಮೆ ಸಾಂಸ್ಕೃತಿಕ ಅಂಶಗಳನ್ನು ಬೆಳೆಸುವುದರ ಅಗತ್ಯವನ್ನು ವಿವರಿಸಿದರು.

ಅರಣ್ಯಾಧಿಕಾರಿ ಶ್ರೀ ಪಿ.ಎಸ್. ಶಂಕರರೆಡ್ಡಿ, ಅಧೀಕ್ಷಕ ಇಂಜನೀಯರ್‌ಗಳು ಶ್ರೀ ವಿ. ಆಂಜನೇಯುಲು ನಾಯುಡು, ಶ್ರೀ ಮುನಿರೆಡ್ಡಿ ಮೊದಲಾದವರು ಭಾಗವಹಿಸಿದರು.

## ರಾಳ್ಲಪಲ್ಲಿ ಶತಜಯಂತಿ ಉತ್ಸವಗಳು

ಖ್ಯಾತ ವಿದ್ವಾಂಸ, ವಿಮರ್ಶಕ ಶ್ರೀ ರಾಳ್ಲಪಲ್ಲಿ ಅನಂತಕೃಷ್ಣ ಶರ್ಮ ಅವರ 100 ನೇ ಜಯಂತ್ಯುತ್ಸವ ತಿರುಪತಿಯ ಅನ್ನಮಾಚಾರ್ಯ ಕಲಾಮಂದಿರದಲ್ಲಿ ದಿನಾಂಕ 30--1--93 ರಿಂದ 2--2--93 ವರೆಗೆ ಮೂರುದಿನಗಳಕಾಲ ನಡೆದು ಯಶಸ್ವಿಯಾದವು.

ಅನ್ನಮಾಚಾರ್ಯರ ಸಂಕೀರ್ತನಗಳ ಸಂಪಾದಕರಲ್ಲಿ ಒಬ್ಬರೂ ಅನ್ನಮಾಚಾರ್ಯ ಸಂಕೀರ್ತನೆಗಳಿಗೆ ಸ್ವರಪ್ರಸ್ತಾರ ಹಾಕಿದವರೂ ಆದ ಪ್ರಾತಃ ಸ್ಮರಣೆಯ ಶ್ರೀ ರಾಳ್ಲಪಲ್ಲಿ ಅವರ ಶತಜಯಂತಿ ಉತ್ಸವಗಳು 30--1--93 ರಂದು ಶ್ರೀ ನೂಕಲ ಚಿನ ಸತ್ಯನಾರಾಯಣ ಅವರ ಅಧ್ಯಕ್ಷತೆಯಲ್ಲಿ ಆರಂಭವಾದವು. ತಿ.ತಿ.ದೇ.ಗಳ ಮಾಜೀ ಕಾರ್ಯನಿರ್ವಹಣಾಧಿಕಾರಿ ಶ್ರೀ ಸಿ. ಅನ್ನಾರಾವ್ ಅವರು ಮುಖ್ಯ ಅತಿಥಿಯಾಗಿದ್ದರು. ಮೊದಲದಿನದ ಕಾರ್ಯಕ್ರಮದಲ್ಲಿ ಶರ್ಮರ ಹಿರಿಯ ಮಗ ಶ್ರೀ ಆರ್. ಎ. ಫಣಿಶಾಯಿ ಅವರ ಗಾತ್ರಕಚೇರಿ ಶ್ರವಣಾನಂದ ವಾಗಿದ್ದಿತು.

ಭಾನುವಾರ ಸಂಜೆ ಭಾಗವತಂ ಪ್ರಾಜೆಕ್ಟ್‌ನ ನಿರ್ದೇಶಕರಾದ ಶ್ರೀ ಎನ್.ಸಿ.ವಿ. ನರಸಿಂಹಾಚಾರ್ಯರ ಉಪನ್ಯಾಸ ವಾದನಂತರ ಶ್ರೀ ಎಸ್. ಆರ್. ಜಾನಕೀರಾಮನ್ ಅವರ ಸಂಗೀತ ನಡೆದು ಯಶಸ್ವಿಯಾಯಿತು.

ಸೋಮವಾರ ಸಂಜೆ ಡಾ. ಎಂ. ಪ್ರಭಾಕರ ರಾವ್ ಅವರು ಉಪನ್ಯಾಸ ನೀಡಿದರು. ನಂತರ ಶ್ರೀ ಜಿ. ಬಾಲಕೃಷ್ಣ ಪ್ರಸಾದ್ ಅವರ ಸಂಗೀತ ಕಚೇರಿ ಕಳೆತುಂಬಿದ್ದಿತು.



# ತಿರುಪತಿಯ ಸ್ಥಳೀಯ ದೇವಾಲಯ ದರ್ಶಿನಿ

ತಿರುಪತಿಗೆ ಬರುವ ಯಾತ್ರಿಕರು ಶ್ರೀವೆಂಕಟೇಶ್ವರಸ್ವಾಮಿಯನ್ನು ಸಂದರ್ಶಿಸಿ ತಿರುಪತಿಯ ಇತರ ದೇವಾಲಯಗಳನ್ನು ಸಂದರ್ಶಿಸಲು ಕಾಲಾವಕಾಶವಿಲ್ಲದೆ ತಮ್ಮ ಸ್ವಸ್ಥಳಗಳಿಗೆ ಹಿಂದಿರುಗುವುದನ್ನು ತಪ್ಪಿಸಲು, ಅವರಿಗೆ ತಿರುಪತಿಯಲ್ಲಿ ಹಾಗೂ ಬಳಿಯಲ್ಲಿ ಇರುವ ಮುಖ್ಯ ದೇವಾಲಯಗಳನ್ನು ತೋರಿಸಿಕೊಂಡು ಬರಲು ತಿ. ತಿ. ದೇವಸ್ಥಾನಗಳು ತಿರುಪತಿಯ ಸ್ಥಳೀಯ ದೇವಾಲಯಗಳ ಬಸ್ ಒಂದನ್ನು ಏರ್ಪಡಿಸಿದೆ. ಈ ಬಸ್‌ನಲ್ಲಿ ಹೊರಟು:

**ಶ್ರೀ ಗೋವಿಂದರಾಜಸ್ವಾಮಿ ದೇವಾಲಯ**
**ಶ್ರೀ ಕೋದಂಡರಾಮಸ್ವಾಮಿ ದೇವಾಲಯ**
**ಶ್ರೀ ಪದ್ಮಾವತೀ ಅಮ್ಮನವರ ದೇವಾಲಯ, ತಿರುಚಾನೂರು**
**ಶ್ರೀ ಕಪಿಲೇಶ್ವರಸ್ವಾಮಿ ದೇವಾಲಯ, ಕಪಿಲತೀರ್ಥ**
**ಶ್ರೀ ಕಲ್ಯಾಣ ವೆಂಕಟೇಶ್ವರಸ್ವಾಮಿ ದೇವಾಲಯ, ಶ್ರೀನಿವಾಸ ಮಂಗಾಪುರ**

ದೇವಾಲಯಗಳನ್ನು ದರ್ಶಿಸಿ ತಿರುಪತಿಗೆ ಹಿಂದಿರುಗಬಹುದು ( ೨ ಗಂಟೆಗಳಲ್ಲಿ )

ಬಸ್ ಹೊರಡುವ ಸ್ಥಳ : ಶ್ರೀ ಗೋವಿಂದರಾಜಸ್ವಾಮಿ ಸತ್ರ (ತಿರುಪತಿ ರೈಲ್ವೇಸ್ಟೇಷನ್ ದಕ್ಷಿಣ)
ಬಸ್ ಹೊರಡುವ ಕಾಲ : ಬಳಗ್ಗೆ ೬-೦೦, ಬೆಳಗ್ಗೆ ೧೦-೦೦, ಸಂಜೆ ೩-೦೦
ಬಸ್ ಪ್ರಯಾಣದ ದರ : ಒಂದು ಟಿಕೆಟ್ಟಿಗೆ **೨೦** ರೂ ಮಾತ್ರ. ಕಿರಿಯರಿಗೆ ಅರ್ಧ ಟಿಕೆಟ್;
(ಇದರಲ್ಲಿ ಆಯಾ ದೇವಸ್ಥಾನಗಳ ಪ್ರವೇಶದ ದರವೂ ಸೇರಿದೆ.)
ಯಾತ್ರಿಕರು ಈ ಅವಕಾಶವನ್ನು ಬಳಸಿಕೊಳ್ಳಬೇಕೆಂದು ವಿನಂತಿಸಲಾಗಿದೆ.

ತಿ. ತಿ. ದೇ.

# ತಿಂಗಳಿನ ಮುಖ್ಯದಿನಗಳು

## ಏಪ್ರಿಲ್ --- 1993

| | |
|---|---|
| 1. ಗುರುವಾರ | ಶ್ರೀರಾಮನವಮಿ. |
| 4. ಭಾನುವಾರ | ತಿರುಮಲೆಯಲ್ಲಿ ಶ್ರೀವೆಂಕಟೇಶ್ವರಸ್ವಾಮಿ ವಸಂತೋತ್ಸವಾರಂಭ. ಮಹಾವೀರಜಯಂತಿ. |
| 5. ಸೋಮವಾರ | ತಿರುಮಲೆಯಲ್ಲಿ ಶ್ರೀವೆಂಕಟೇಶ್ವರಸ್ವಾಮಿ ರಜತ ರಥೋತ್ಸವ. |
| 6. ಮಂಗಳವಾರ | ತಿರುಮಲೆಯಲ್ಲಿ ಶ್ರೀವೆಂಕಟೇಶ್ವರಸ್ವಾಮಿ ವಸಂತೋತ್ಸವ ಸಮಾಪ್ತಿ. |
| 18. ಭಾನುವಾರ | ಶ್ರೀ ಭಾಷ್ಯಕಾರ ಉತ್ಸವಾರಂಭ. |
| 23. ಬುಧವಾರ | ಶಿವಾಜಿ ಜಯಂತಿ. |
| 24. ಶನಿವಾರ | ಪರಶುರಾಮ ಜಯಂತಿ. |
| 25. ಭಾನುವಾರ | ಮಧುರಕವಿ ಆಳ್ವಾರ್ ಉತ್ಸವಾರಂಭ. ಬಸವ ಜಯಂತಿ. |
| 27. ಮಂಗಳವಾರ | ಶ್ರೀ ಭಾಷ್ಯಕಾರ ಶಾತ್ತುಮೊರೆ, ಶಂಕರ ಜಯಂತಿ. |
| 30. ಶುಕ್ರವಾರ | ಪದ್ಮಾವತೀ ಶ್ರೀನಿವಾಸ ಪರಿಣಯೋತ್ಸವಾರಂಭ. |

# ಮುಂದಿನ ಸಂಚಿಕೆಯಲ್ಲಿ

## ಸಪ್ತಗಿರಿ --- ಏಪ್ರಿಲ್ 1993

**ಶಂಕರಾಚಾರ್ಯ**
--ಎಚ್. ವಿ. ನರಸಿಂಹಮೂರ್ತಿ

**ರಾಮಾವತಾರ**
--ಡಾ. ವಿ. ಎಸ್. ಎಸ್. ಆಚಾರ್ಯ

**ಧೀರಸಮೀರೆ....**
--ಬ. ನ. ಗುಂಡೂರಾವ್

**ಕಶ್ಯಪ ಋಷಿ**
--ಕೆ. ಕೇಶವನ್

**ಎರಡು ಶ್ರೀವೈಷ್ಣವ ಮಠಗಳು**
--ಸಿ. ಗೋವಿಂದಾಚಾರ್

**ಜೊತೆಗೇ ಆಕರ್ಷಕವಾದ ಮತ್ತೂ ಹಲವಾರು ಸಾಮಯಿಕ ಲೇಖನಗಳು**
**ತಮ್ಮ ಪ್ರತಿಯನ್ನು ಇಂದೇ ಕಾದಿರಿಸಿ.**

ಸೂಚನೆ : ಸಪ್ತಗಿರಿ ವಾರ್ಷಿಕ ಚಂದಾ ಹನ್ನೆರಡು ರೂಪಾಯಿ ಮಾತ್ರ. ತಮ್ಮ ಚಂದಾ ಹಣವನ್ನು ಎಂ. ಓ. ಡಿ.ಡಿ. ಯ ಮೂಲಕ ಸಂಪಾದಕರು, ಸಪ್ತಗಿರಿ, ತಿ.ತಿ.ದೇ. ತಿರುಪತಿ -- ಇವರಿಗೆ ಕಳುಹಿಸಿ. ವಿಳಾಸವನ್ನು ಸ್ಪಷ್ಟವಾಗಿ ಬರೆಯಿರಿ ಎಂದು ವಿನಂತಿ.

# ಶ್ರೀ ಗೋವಿಂದರಾಜಸ್ವಾಮಿ ದೇವಾಲಯ, ತಿರುಪತಿ.

## ದರ್ಶನ ಹಾಗೂ ಸೇವಾ ವಿವಗಳು

| | ರಿಂದ | ವರೆಗೆ |
|---|---|---|
| ಸುಪ್ರಭಾತ | ಪ್ರಾ ೫-೦೦ | ಪ್ರಾ ೫-೩೦ |
| ವಿಶ್ವರೂಪ ಸರ್ವದರ್ಶನ* | ಪ್ರಾ ೫-೩೦ | ಪ್ರಾ ೭-೦೦ |
| ತೋಮಾಲ ಸೇವೆ (ಆರ್ಜಿತ) | ಪ್ರಾ ೭-೩೦ | ಪ್ರಾ ೮-೦೦ |
| ಅರ್ಚನೆ (ಆರ್ಜಿತ) | ಪ್ರಾ ೮-೦೦ | ಪ್ರಾ ೮-೩೦ |
| ಸರ್ವದರ್ಶನ | ಪ್ರಾ ೯-೦೦ | ಮ ೧೨-೩೦ |
| | ಮ. ೧-೦೦ | ಸಂ. ೬-೦೦ |
| | ರಾ ೭-೦೦ | ರಾ ೮-೪೫ |
| ಏಕಾಂತಸೇವೆ | | ರಾ ೯-೦೦ಕ್ಕೆ |

* ಶುಕ್ರವಾರ, ಏಕಾದಶಿ, ಉತ್ತರಾನಕ್ಷತ್ರದ ದಿನ ಮತ್ತಿತರ ಹಬ್ಬ ಹರಿದಿನಗಳಲ್ಲಿ ವಿಶ್ವರೂಪ ಸರ್ವದರ್ಶನವು ಪ್ರಾ ೫-೩೦ ರಿಂದ ಪ್ರಾ ೬-೩೦ ರ ವರೆಗೆ ಮಾತ್ರ.

## ಆರ್ಜಿತ ಸೇವೆಗಳು

| | |
|---|---|
| ೧. ಗರುಡವಾಹನ | ೩೨-೦೦ |
| ೨. ಚಂದ್ರಪ್ರಭ ವಾಹನ | ೩೨-೦೦ |
| ೩. ಗಜವಾಹನ | ೩೨-೦೦ |
| ೪. ಅಶ್ವವಾಹನ | ೩೨-೦೦ |
| ೫. ಸಿಂಹವಾಹನ | ೩೨-೦೦ |
| ೬. ಹಂಸವಾಹನ | ೩೨-೦೦ |
| ೭. ಚಿಕ್ಕಶೇಷವಾಹನ | ೩೨-೦೦ |
| ೮. ದೊಡ್ಡ ಶೇಷವಾಹನ | ೬೨-೦೦ |
| ೯. ಸೂರ್ಯಪ್ರಭವಾಹನ | ೬೨-೦೦ |

## ಪಡಿಪ್ರಸಾದಗಳು

| | |
|---|---|
| ೧. ದೋಸೆ, ಕಾಲಸೋಲ | ೩೫-೦೦ |
| ೨. ದಧ್ಯೋದನ " | ೪೦-೦೦ |
| ೩. ಪುಳಿಯೋಗರೆ " | ೫೦-೦೦ |
| ೪. ಪೊಂಗಲು " | ೫೫-೦೦ |
| ೫. ಸಕ್ಕರೆಪೊಂಗಲ್ " | ೬೫-೦೦ |
| ೬. ಶಾಕರ ಭಾತ್ " | ೮೫-೦೦ |
| ೭. ಕೇಸರಿಭಾತ್ " | ೯೦-೦೦ |
| ೮. ಸೀರ " | ೧೫೫-೦೦ |

ವಿವರಗಳಿಗೆ:
**ಪೇಷ್ಕಾರ್**
ಶ್ರೀ ಗೋವಿಂದರಾಜಸ್ವಾಮಿ ದೇವಾಲಯ,
ತಿರುಪತಿ.

Edited and published on behalf of T.T. Devasthanams by K. Subba Rao, M.A., and Printed at T.T.D. Press
by M. Vijayakumar Reddy, Manager, T.T.D. Press, Tirupati - 517 507

